## ಶ್ರೀ ಪುರಂದರದಾಸರ ಮಕ್ಕಳು ಮತ್ತು ಶಿಷ್ಯರಾದ

# ಶ್ರೀ ಗುರುಪುರಂದರವಿಠ್ಠಲದಾಸರ ಪದಗಳು



ಸಂಪಾದಕರು

ಶ್ರೀ ಹನುಮಂತರಾಯ ಗೊರೆಬಾಳ

# ಶ್ರೀ ಪುರಂದರ ದಾಸರ ಸಾಕ್ಷಾತ ಮಕ್ಕಳೂ ಶಿಷ್ಯರಾದ ಶ್ರೀ ಗುರು ಪುರಂದರವಿಠ್ಠಲರ ಪದಗಳು

ಪದ : ೦೧ ರಾಗ : ನಾಟಿ, ಝಂಪಿ ತಾಳ

ದಾಸರು ಜನ್ಮ ಪಡೆದ ವಿಸ್ತಾರವನೆ ಕೇಳಿ ।
ಲೇಸಾಗಿ ಭಕುತಿಯಿಂದೆಲ್ಲ ನೀವು ।
ಸಾಸಿರ ಜನ್ಮದ ಪಾಪ ಭಸ್ಮಾಗುವದು ।
ಪುಶಿಯಲ್ಲಿ ಹರಿಹಾವನ್ನೆ ಪಿಡಿವೆ ।
ಏಸು ಜನ್ಮದ ಪುಣ್ಯ ಮಾಡಿದರೆ ದೊರಕದು ।
ದೋಷವುಳ್ಳ ನರರಿಗೆ ದೊರಕೊಂಬೋದೆ ।
ವಸುಧಿಯೊಳಗೆ ಯಿವರಂಥ ।
ದಾಸರು ಹಿಂದೆ ಮುಂದಿಲ್ಲ ।
ವಾಸುದೇವನೆ ಬಲ್ಲ ಅವರ ಮಹಿಮೆಗಳ ॥ ಪ ॥

ಸೃಷ್ಟಿಯೊಳು ಪುರಂದರ ಪಟ್ಟಣದೊಳಗೊಬ್ಬ ।
ವಿಠ್ಠಲನೆಂಬ ಚಿನಿವಾರ ಇರಲಾತನಿಗೆ ।
ಪಟ್ಟದ ರಾಣಿ ಆಕಿಯ ಹೆಸರು ರುಕ್ಮಿಣಿಯು ।
ಇಷ್ಟಳಾಗಿಹಳು ಅತಿ ಸಿರಿಯಿಂದಲಿ ॥
ಪಟ್ಟೆ ಧನಧಾನ್ಯ ಕೋಟ್ಯಾಧಿಕಾರಿಯಾಗಿ ।
ಅಷ್ಟದಿಕ್ಕಿನಲಿ ದ್ರವ್ಯ ಮೆರವುತಿರಲಾಗ ।
ಅಷ್ಟರೊಳಗೆ ಅವರ ಪೊಟ್ಟಿಯಲಿ ಪುಟ್ಟಿದರು ।
ಇಷ್ಟವಾದ ಪುರಂದರನೆಂಬ ಪುತ್ರ ॥ ೧ ॥

ಮುಂಜಿಮದುವೆಯ ಮಾಡಿ ಮಮತೆಯಿಂದಲಿ ಅವರ ।
ಪಂಜರದ ಗಿಳಿಯಂತೆ ಸಲಹುತಿರಲಾಗಲು ।
ಕಂಜನಾಭನ ಪಾದಕಂಜವನು ಧೇನಿಸುತ ।
ಕುಂಜರನ ತೆರದಿ ಮೆರವು ತಿರಲು ।
ಅಂಜಿ ಹಿರಿಯರ ಪಾದ ಕಂಜ ಸೇವಿಯ ಮಾಡಿ ।
ಅಂಜನೇಯ ತನಯನೇ ಗತಿ ಎನ್ನುತಲಿರಲು ।
ಕಂಜ ಮುಖಿಯಳ ಕೂಡಿ ಅಂಜಿ ಹಿರಿಯರಿಗೆ ಭೂ ।
ಕಂಜದೊಳಗೆ ಪರವಶವಾಗಿಯಿಪ್ಪರೂ ॥ ೨ ॥

ಒಂದು ದಿನದಲಿ ಮಗನ ಕರೆದು ಕೂಡಿಸಿಕೊಂಡು ।
ಛಂದದಿಂದಲಿ ಹರುಷ ಪೂರಿತನಾಗಿ ಪಿತ ।
ಒಂದೆರಡು ಸಾವಿರ ಹೊನ್ನುಗಳು ತಂದು ಕೊಟ್ಟು ।
ಅಂದದಲಿ ಉದ್ಯೋಗ ಮಾಡೆಂದರೂ ॥
ಅಂದ ಮಾತನು ಕೇಳಿ ವಳಿತೆಂದು ತಲೆದೂಗಿ ।
ಕಂದರ್ಪನೈಯ್ಯನ ಮನದಿ ಧೇನಿಸುತಲಿ ।
ಛಂದದಿಂ ಹೊಗಳಿ ಆನಂದದಿ ಬ್ರಾಹ್ಮರ ಕರೆದು ।
ಕುಂದದೆ ದ್ರವ್ಯವ ಕೊಟ್ಟರು ॥ ೩ ॥

ಹೀಗೆ ನಾಲಕು ಭಾರಿ ನೋಡಿ ಎಲ್ಲರು ಬಂದು ।
ಹ್ಯಾಗೆ ಉದ್ಯೋಗ ಮಾಡುವನೆಂದು ಹೊಕ್ಕರು ।
ರಾಗದಿಂದಲಿ ಅವರು ವಿಠಲನ ಗುಡಿಯೊಳಗೆ ।
ಹಗ್ಗದಿಂದಲಿ ಕಟ್ಟಲೂ ಬಾಗಿಲಿಕ್ಕಿ ಬಿಟ್ಟರು ।
ಹಿಗೇಳು ದಿನವೆಲ್ಲ ।
ಯೋಗಿಯಂತೆ ಧೇನಿಪರು ಹರಿಯ ನಿರಾಹಾರದಿ ।
ರಾಗ ಭಕುತಿಯ ನೋಡಿ ಕ್ಷೀರಸಾಗರ ಶಯನ ।
ಆಗ ಹರುಷಿತನಾದನು ॥ ೪ ॥

ಭಂಗಾರ ಹರಿವಾಣಕೆ ರಂಗು ಮಾಣಿಕ ಬಿಗಿದ ।
ಶೃಂಗಾರವಾಗಿ ಥಳಥಳನೆ ಪೊಳೆವುತಲಿರಲು ।
ಅಂಗನೇ ಶ್ರೀದೇವಿ ಮಾಡಿ ಷಡುರಸದನ್ನ ।
ರಂಗನ ಬಳಿಯ ಹರಿವಾಣ ತರಲು ।
ತುಂಗದೃಷ್ಠಿಯಲ್ಲಿ ಶುಭಾಂಗ ದಾಸರನು ।
ಅಂಗನ್ಯಾವರಿಸಿ ಊಟವ ಮಾಡೆಂದೆನಲು ।
ಕಂಗಳಿಂ ನೋಡಲಳವಲ್ಲ ಚಂಬುಥಾಲಿಗಳು ।
ಗಂಗೆ ಮೊದಲಾದವರು ನೀರು ತಂದಿಡಲು ॥ ೫ ॥

ಏನು ಮಾಡಿದರುಣಲೊಲ್ಲದೆ ಘನ ಮಹಿಮ ।
ನೀನುಂಡದೂಟದನ್ನನುಂಬೆನೆನಲು ।
ದೀನರಕ್ಷಕ ಭೂದುರ್ಗೆಯರ ಸಹಿತಾಗಿ ।
ತಾನುಂಡು ಉಚ್ಚಿಷ್ಟವ ॥
ನೀನೂಟ ಮಾಡೆಂದು ಹರುಷ ಪ್ರಸನ್ನನಾಗಿ ।
ತಾನೆ ಉಣಿಸಿದನು ಕರುಣದಲಿಂದ ಈ ವಿಧದಿ ।

ನೀನು ಮಾಡಿದ ಪದವು ಶಾಸ್ತ್ರ ।
ಸಮ್ಮತವಾಗಲೆಂದು ವರ ವನೆ ಕೊಟ್ಟನು ॥ ೬ ॥

ಅಷ್ಟದಿವಸಾದ ಮೇಲಷ್ಟ ಮಂದಿಯ ಕೂಡಿ ।
ಕೊಟ್ಟನೋ ಪ್ರಾಣವ ಇವನೆಂದು ಬಾಗಿಲ ತೆರೆದು ।
ವಿಠ್ಠಲನ ಗುಡಿ ಹೊಕ್ಕು ಎಲ್ಲ ನೋಡುತಿರಲೂ ।
ಅಷ್ಟ ದಿಕ್ಕು ಹೊಳೆವ ಹರಿವಾಣ ।
ದಿಟ್ಟಿಸಿ ನೋಡಲಾ ಗುಡಿಯೊಳಗೆ ದಾಸರು ।
ವಿಠ್ಠಲನ ಪದ ಧ್ಯಾನದಿ ಮಗ್ನವಾಗಿರಲು ।
ಬಟ್ಟಲು ಚಂಬು ಖಚಿತವಾದುದಾ ।
ಮುಟ್ಟಿ ನೋಡ್ಯಾಶ್ಚರ್ಯಗೊಂಡರಾಗ ॥ ೭ ॥

ತಂದೆ ತಾಯಿ ಬಂಧು ಬಳಗವೆಲ್ಲವು ಬಂದು ।
ಕಂದ ನಿನ ಹೆಸರು ಕೊಂಬುವದಿಲ್ಲೆನಲು ।
ಛಂದವಾಧರಿವಾಣಾದಿಗಳು ನೀನೆ ಕೊಳ್ಳು ।
ಎಂದು ಕೈಯಲ್ಲಿ ಕೊಟ್ಟರು ।
ಮಂದಗಮನೆ ಮೊದಲಾದ ಮಂದಿಗಳು ಕರ ।
ತಂದು ಮಂದಿರದೊಳಗೆ ಕುಳ್ಳಿರಿಸಿದರಾಗ ।
ಅಂದದಿಂ ಬ್ರಾಹ್ಮಣರ ಕರೆದು ಆ ಹರಿವಾಣ ।
ನಂದದಿಂದಲಿ ಕೊಟ್ಟರು ॥ ೮ ॥

ಹೆಂಡತಿಯ ಮನಸು ನೋಡುವೆನೆಂದು ಆಕೆಯ ।
ಕಂಡು ಹಿಡಿ ತುಂಬ ಹೊನ್ನುಗಳು ಕೊಡೆ ಕಡುಬ್ಯಾಗ ಕೊಂಡು ।
ಹಿಂಡು ಬ್ರಾಹ್ಮಣರುಗಳ ಕರೆದು ದ್ರವ್ಯ ।
ಕಂಡ ಹಾಗೆ ಕೊಟ್ಟಳು ।
ತಂಡ ತಂಡದಿ ತಮ್ಮ ಹೆಂಡತಿಯ ಕರಕೊಂಡು ।
ಘಂಡರಾಪುರಕೆ ಬಂದುವಾಸವಾದರು ।
ಪುಂಡರೀಕ ವರದನ ಕಂಡು ಹರುಷದಲಿ ।
ಕೊಂಡು ಆಜ್ಞೆಯ ಹಂಪಿಗೆ ಬಂದರು ॥ ೯ ॥

ಅಪ್ಪಣ್ಣ ಭಾಗವತ ಪರುಶ ಭಾಗವತರೆಂತೆಂಬ ।
ಒಪ್ಪುವ ಶಿಷ್ಯರು ಸಂಗಡದಿ ಇರುತಿಹರು ।
ಆ ಪಟ್ಟಣದಿ ವ್ಯಾಸರಾಯನೆಂಬ ಯತಿಯು ।
ತಪ ಮಾಡುತಿರಲು ಕಂಡು ।

ಅಪರಾಧಿ ನಾನೆಂದು ನಮುಸ್ಕಾರಗಳ ಮಾಡೆ ।
ತಪ್ಪದೇ ದಾಸರ ನೋಡಿ ಆಗೆಂದರು ।
ಉಪದೇಶ ನಿನಗೆ ಆಗದೊ ಇಲ್ಲವೆಂದೆನಲು ।
ತಪಿಸಿಗುರು ಒಲಿವನಕ ವಿಠ್ಠಲನೆಂದರು ॥ ೧೦ ॥

ನುಡಿವುತಲಿ ದಾಸರು ಅಡಿಗಡಿಗೆ ಎರಗುತಲಿ ।
ಬಿಡದೆ ಮಂತ್ರಾಮುದ್ರ ಧಾರಣೆ ಉಪದೇಶ ।
ತಡಿಯದೇ ಕೊಂಡು ವೈರಾಗ್ಯ ಭಕುತಿಯ ತಾಳಿ ।
ಕಡಿದು ದುರಿತಾದಿಗಳನೂ ।
ಪೊಡವಿಯೊಳು ವಿಜಯನಗರದಿ ।
ಗುರುಪುರಂದರ ವಿಠಲನ ಪಾದಗಳ ।
ದೃಢ ಮನಸಿನಿಂದಲಿ ಅಡಿಗಡಿಗೆ ಗುರುಗಳ ।
ಪಾದವನು ಸ್ಮರಿಸುತಾ ಸಡಗರದಿ ಧೇನಿಸಿದರು ॥ ೧೧ ॥

**ಪದ : ೦೨** **ರಾಗ : ಸೌರಾಷ್ಟ್ರ, ತಾಳ : ಆದಿ**

ಒಂದಾನು ಒಂದು ದಿವಸದಲ್ಲಿ ವ್ಯಾಸರಾಯರು ।
ಛಂದದತಿ ಸಾಧನ ದ್ವಾದಶಿ ಬರಲು ।
ಅಂದದಲಿ ಪುರಂದರದಾಸರಿ
ಗಿಂದು ಭೋಜನಕೆ ಬನ್ನೆಂದು ಪೇಳಿದರು ॥ ಪ ॥

ಒಳಿತೆಂದು ದಾಸರು ಪೋಗಿ ತಾವು ನಿ ।
ರ್ಮಳ ಸ್ನಾನ ಜಪಗಳ ಮಂತ್ರ ಹರಿ ಪೂಜೆಯನೆ ಮಾಡಿ ।
ಥಳಥಳಿಸುವ ವಿಠಲನ ದಿವ್ಯ ಮೂರ್ತಿಯ ಪದ ।
ಗಳ ಧೇನಿಸುತ ಕುಳಿತರು ಜನಕೇಳಿ ॥ ೧ ॥

ವಿಠಲನ ದಿವ್ಯಮೂರ್ತಿಯ ಪಾಡಿ ದೃಷ್ಟಿಯಿಂ ನೋಡಿ ಮನ ।
ಮುಟ್ಟಿ ಮುಂದೊಲಿದು ಕುಣಿ ಕುಣಿಶ್ಯಾಡಿ ।
ಥಟ್ಟನೆ ವೇದಕೆ ಸಮವಾದ ಪದಗಳು ।
ನಿಷ್ಠೆಯಿಂದಲಿ ಮಾಡ್ಯೆಭೀಷ್ಟಿಯ ಪಡೆದರು ॥ ೨ ॥

ಎಡೆಯೊಳು ಷಡುರಸನ್ನವ ನೀಡಿ ।
ಕಡುವೇಗದಲಿಂದ ಬಿಡದೆ ದಾಸರ ದಾರಿಯನು ನೋಡಿ ।
ಎಡಬಲದ ಅಷ್ಟದಿಗ್ಗಜದಿಂಡಿಯರೆಲ್ಲ ।
ತಡೆಯದೇಗದರಿಸಿದರು ದಾಸರನ ॥ ೩ ॥

ಹಗಲು ಒಂಭತ್ತು ತಾಸಾಗಿರಲು ಆಗಿದ್ದು ।
ಬ್ಯಾಗ ಗುರುಗಳ ಸಮೀಪಕ್ಕೆ ಬರಲೂ ।
ಮುಗಿದು ಕರಯುಗವ ಬಗೆಬಗೆಯಿಂದಲಿ ।
ಜಗದೊಳು ನಾನೀಗ ಅಪರಾಧಿಯೆಂದರು ॥ ೪ ॥

ಭೋಜನ ಮಾಡಿ ಶ್ರೀ ಗುರುಗಳು ಸಿಂಹಾಸನದಲ್ಲಿ ।
ರಾಜಿಸುತ ಬಂದು ಕುಳ್ಳಿರಲು ।
ಆ ಜನರೊಳಡಗಿದ್ದ ದಾಸರನು ಕರೆಯಲು ।
ನೈಜ ಭಕುತಿಯಲಿ ಬಂದು ಕುಳಿತರು ॥ ೫ ॥

ಪದಗಳು ಬರೆದವಹಿ ಮುಂಕೊಂಡು ಪೋಗಿ ।
ಮಧ್ವ ಶಾಸ್ತ್ರದ ಮೇಲೆ ಕುಳ್ಳಿರಲಾಗ ಕಂಡು ।
ಹದನನರಿಯದೆ ದಿಂಡಿಯನೊಬ್ಬನು ಆ ।
ಪದದೊಹಿ ತೆಗೆದು ಬಿಸುಟಿದನಾಗ ॥ ೬ ॥

ಎರಡಾವರ್ತಿ ತೆಗೆಯಲಾಗ ತಿರತಿರುಗಿ ಬಂದು ।
ವರ ಪುಸ್ತಕ ಮೇಲೆ ಕುಳ್ಳಿರೆ ಬ್ಯಾಗ ।
ಗುರುವ್ಯಾಸರಾಯರು ನೋಡಿ ಹರುಷದಿಂದ ।
ಕರೆದು ಬೈದರವನಿಗೆ ಕಡುಮೂರ್ಖನೆಂದು ॥ ೭ ॥

ಬರೆದ ವಹಿಯ ತೆಗೆದು ಬಿಸಾಟಿದರೆ ತಿರತಿರಗಿದರ ಮ್ಯಾಲೆ ಬರೆ।
ವರನಾಲ್ಕು ವೇದಾರ್ಥಗಳುಂಟು ಅಲ್ಲಿ ।
ನರರುತ್ತಮರೆಲ್ಲ ನೋಡಿ ಹರುಷದಿಂದ ।
ಧರೆಯೊಳು ಪುರಂದರ ಉಪನಿಷತ್ತೆಂದರು ॥ ೮ ॥

ಗುರುರಾಯರು ನೋಡಲು ದಾಸರಾಗ ।
ಭರದಿಂದ ಹೊದ್ದ ಅರವಿಯ ನೊರಸಲು ಕೈಯಿಂದಾಗ ।
ತ್ವರಿತದಿ ಕೇಳಲು ವಿಠ್ಠಲನ ಗುಡಿಯೊಳಗೆ ।
ಪರಧಿಗೆ ಉರಿಹತ್ತಲೊರಸಿದೆವೆಂದರು ॥ ೯ ॥

ಆಗ ಈ ಮಾತು ಯತಿಗಳು ಕೇಳಿ ।
ಬ್ಯಾಗ ಶಿಷ್ಯರಿಗೆ ನೋಡಿ ಬಾಯೆಂದೆನಲಾಗ ।
ಬ್ಯಾಗದಿಂ ಬಂದು ಕೇಳಲು ಅವರು ।
ಈಗ ದಾಸರು ಬಂದು ಒರಸಿದರೆಂದು ॥ ೧೦ ॥

ಈ ಮಾತು ಕೇಳಿದಾಕ್ಷಣ ಬ್ಯಾಗ ಪ್ರೇಮದಿ ಬಂದು ।
ಸ್ವಾಮಿ ರಾಯರಿಗೆ ಪೇಳಲಾಗ ।
ನಾಮವ ಸ್ಮರಿಸುತ ಪ್ರೇಮಾಲಿಂಗನ ಕೊಟ್ಟು ।
ಕಾಮಿತಾರ್ಥವ ನೀವ ಕಲ್ಪತರು ಎಂದರು ॥ ೧೧ ॥

ಇಂತಂತ ಅನುಭವ ಮಾತುಗಳಾಡಿ ಲಕ್ಷ್ಮಿ ।
ಕಾಂತನ ಅಂತರಂಗದಲಿ ಧ್ಯಾನ ಮಾಡಿ ।
ಕಾಂತಿಯ ಹೆಚ್ಚಿ ಕಂತುಪಿತನ ಮೂರ್ತಿ ।
ಶಾಂತತ್ವದಿಂದಲಿ ಶರಣು ಮಾಡಿದರು ॥ ೧೨ ॥

ಗಜಕೋಣಿಯಲ್ಲಿ ಇಬ್ಬರು ಕೂಡಿ ।
ವಿಜಯವಿಠ್ಠಲನ ಭಜನೆ ಮನದೊಳಗೆ ಮಾಡಿ ।
ತ್ರಿಜಗದೊಡೆಯ ಗುರು ಪುರಂದರ ವಿಠ್ಠಲನ್ನ ।
ನಿಜ ವೈಕುಂಠದ ಮುಕ್ತಿಯ್ಯೈದಿದರು ॥ ೧೩ ॥

**ಪದ : ೦೩ ರಾಗ : ಶಂಕರಾಭರಣ, ತಾಳ : ಝಂಪಿ**

ದಾಸರು ಶುಕ್ಲ ವೃತ್ತಿಗೆ ಪೋಗಿಯಿರಲು ।
ವಾಸುದೇವ ಮನೆಗೆ ಶೂದ್ರನಾಗಿ ಬಂದಾಗ ॥ ಪ ॥

ಸೀರೆ ಛಿದ್ರಗಳೆಲ್ಲ ವಾರಣದಲಿ ಹೊಲಿಯು ।
ತಿರೆ ದಾಸರೆಲ್ಲಿಹರೆಂದು ಬಂದು ಕೇಳೆ ।
ನಾರಿಯು ಪರಮ ದಾರಿದ್ರತ್ವದಿಂ ಬಳಲಿ ।
ಕ್ರೂರಳಾಗಿ ವಿಠ್ಠಲನ ಬೈದು ಪೋಗೆನಲು ॥ ೧ ॥

ಕಷ್ಟ ಬಡುತಾಳೆಂದು ಕರುಣದಲಿ ಹರಿತಾನು ।
ಇಷ್ಟ ಒಡವೆಗಳೆಲ್ಲ ಭಾಗ್ಯವೆಲ್ಲ ।
ಪಟ್ಟಾವಳಿ ವಸ್ತ್ರಗಳು ಕಲ್ಪಿಸಿ ಬೇಗ ।
ಕೊಟ್ಟು ಆ ಕ್ಷಣದಲ್ಲಿ ವಿಠ್ಠಲನು ಪೋದ ॥ ೨ ॥

ಅಪ್ಪಣ್ಣ ಭಾಗವತರಾ ಕೈಪಿಡಿದು ಬರಲು ।
ವಿಪರೀತವಾಗಿದೆ ಕುಟೀರ ಕಾಣದೆ ।
ಅಪ್ಪಿತಪ್ಪಿ ಹಿಂದೆ ಮುಂದೆ ನೋಡಿ ಅಳಲಿ ।
ಗುಪಿತದಿಂ ಮನೆಯೊಳಗೆ ಪೋಗಿ ಕರೆದರು ಸತಿಯ ॥ ೩ ॥

ಇದು ಏನು ಚರಿತವೀ ಸದನದೊಳು ಸೌಭಾಗ್ಯ ।
ಒದಗಿತೆಲ್ಲಿಂದ ಬಂದಿದ್ದರಾರು ।
ಕದನ ಮಾರಿಯ ಪೇಳು ಎನಲು ಎಂದಳು ಆಗ ।
ಇದು ಏನರಿಯೆ ಶೂದ್ರ ಬಂದಿರಲು ಬೈದೆ ॥ ೪ ॥

ಹಾಹಾ ಇದೇನು ಆಶ್ಚರ್ಯಯೆನುತಲಿ ವಿಠಲ ।
ನೀಹ ಸ್ಥಾನದಲಿ ಪೋಗಿ ಮೊರೆಯಿಟ್ಟರು ।
ಪ್ರಹ್ಲಾದ ವರದ ಈ ಭಾಗ್ಯ ಒಯ್ದರೆ ಒಳಿತು ।
ಜಿಹ್ವೆ ಕಿತ್ತು ಕೊಳುವೆನೆಂದೆನಲು ಕೈಪಿಡಿದ ॥ ೫ ॥

ಪಾಯದಿರು ಯಂತೆಂದು ಕಳುಹಿಲಾಕ್ಷಣ ಮನೆಯೊ ।
ಳಿಹ ಸೌಭಾಗ್ಯವಾ ದೃಶ್ಯವಾಗೆ ।
ಜಾಯೆ ತನದಾರಿದ್ರ ತನದಲಿ ಕುಟಿರದೊಳಿರೆ ।
ಸ್ತ್ರೀಯಳ ನೋಡಿ ಹರಿಗಾಯನವ ಮಾಡಿದರು ॥೬॥

ಪರಮ ಸ್ಮರಣೆಯ ಮಾಡುತ ।
ಪರಮ ಭಗವಂತನ ಕಡು ಮಹಿಮಿದೆಂದು ।
ಗುರುಪುರಂದರ ವಿಠಲನ್ನು ।
ಕೀರ್ತಿ ಕೊಂಡಾಡಿದರು ॥ ೭ ॥

**ಪದ : ೦೪** **ರಾಗ : ಶಂಕರಾಭರಣ, ತಾಳ : ತ್ರಿವಿಡಿ**

ತಿಳಿಯದು ಜನರಿಗೆ ಜ್ಞಾನಿಗಳ ಮಹಿಮೆ ।
ನಳಿನನಾಭನ ದಾಸರ ಬೆಡಗ ॥ ಪ ॥

ಲಕ್ಷ್ಮಿ ಒಲಿಯಾಲಲ್ಲ ಗರುವದಿ ಮೆರೆಯುವರು ।
ಲಕ್ಷ್ಯ ಮಾಡರು ಗುರು ಹಿರಿಯರನ್ನು ।
ಕಕ್ಷಿ ಎನಗೆ ಒಬ್ಬರಿಲ್ಲೆಂದು ತಿರುಗಿ ಉ ।
ಪೇಕ್ಷದಿಂದಲಿ ಲಂಪಟದಿ ತೊಳಲುತಿಹರು ॥ ೧ ॥

ದಾಸರಾಬೀಗನು ರೋಷದಿ ಮನೆಯೊಳು ।
ಸೊಸಿಯ ಕರೆದು ಪರಿಹಾಸ್ಯದಿಂದ ॥
ದೇಶ ತಿರುಗುವ ಅನ್ನ ಕಾಣದಾತನ ಮನೆ ।
ಊಟವಿಲ್ಲದೆ ಬಹಳ ದಿನವಾಯಿತೆಂದ ॥ ೨ ॥

ತಂದೆ ಬಳಿಯಲಿ ಬಂದು ಮಗಳು ಪೇಳಿದಳಾಗಾ ।
ತಂದ ಮಾತುಗಳೆಲ್ಲ ಪೇಳಿದನು ।
ಹೊಂದಿ ಬಡತನದಲ್ಲಿ ಇದ್ದದ್ದು ಅವರಿಗೆ ।
ಅಂದವಾಗಿದೆ ಎಂತೆಂದು ಪೇಳಿದರಾಗ ॥ ೩ ॥

ಪುತ್ರಿಯ ಮುನಿಸು ತಿಳುಹಿ ಮತ್ತೆಮನದಲ್ಲಿ ।
ಸತ್ಯವಾಡಿದರಿದು ಪುಶಿಯಲ್ಲವು ।
ವ್ಯರ್ಥ ನೀ ಚಿಂತೆ ಮಾಡುವದ್ಯಾಕೆ ವಳಿತಂದು ।
ನಿತ್ಯ ನಾ ಮಾಡುವ ಕೃತ್ಯ ಕಂಡಾಡಿದರು ॥ ೪ ॥

ಧ್ಯಾನದಲಿ ಕುಳ್ಳಿರೆ ಅರಿಕೆಯಿಲ್ಲದ ಹಾಗೆ ।
ದಾನವಾಂತಕ ರಂಗ ಸಡಗರದಿ ।
ಅನುವಾದ ಇಂದ್ರ ಕುಬೇರನ್ನ ಕರಸಿ ಇಂ ।
ದಿನ ದಾಸರ ಮನೆ ಪ್ರಸ್ಥಸಾಗಿಸಿರೆಂದ ॥ ೫ ॥

ಹರಿಯಾಜ್ಞ ಕೇಳಿ ಹರುಷದಿಂದುಭಯರು ।
ಪುರದ ಜನರಿಗೆ ಔತುನವ ಪೇಳೆ ।
ಪುರಂದರ ದಾಸರ ಮನೆಗೆ ಬಾಹೊದುಯೆಂದು ।
ತ್ವರಿತದಿಂದಲಿ ಬಂದು ಆಯಿತವಾಗಿರಿ ಎಂದರು ॥ ೬ ॥

ಏನು ಸೋಜಿಗವಿದು ದಾಸರ ಮನೆ ಪ್ರಸ್ಥ ।
ಮುನ್ನೆ ನೈವೇದ್ಯದ ಚಿನ್ಹೆಯಿಲ್ಲ ।
ದಿನ ಹೊತ್ತು ಬಹಳಾಗೆ ಕ್ಷುದಿಗೆ ತಾಳದೆ ಬಲು ।
ಅನುಮಾನದಿಂದ ಮನೆಗೆಡೆ ತಾಕುತಿಹ್ಯರು ॥ ೭ ॥

ಹನ್ನೊಂದು ತಾಸಿಗೆ ಸಕಲ ಪಾಕಗಳಾಗೆ ।
ಚನ್ನಾಗಿ ತಾವು ಸರ್ವರನ ಕುಳ್ಳಿರಿಸಿ ।
ಮುನ್ನೆ ಸಾಲು ಸಮಯ ದೀವಿಗೆಗಳಿಟ್ಟು ।
ಚನ್ನ ಸಕ್ಕರಿ ತುಪ್ಪದಿಂ ಕೈ ತೊಳಿದರು ॥ ೮ ॥

ಬೀಗನ ಸಹಿತ ಮನೆಯ ಮಂದಿಗೆ ಯೆಲ್ಲ ।
ಆಗಲೆ ದಿವ್ಯ ವಸ್ತ್ರಗಳ ಕೊಟ್ಟು ।
ಹೋಗಿ ಬನ್ನಿರಿ ಬಹಳ ತಡವಾಯಿತು ಎಂದು ।
ಬ್ಯಾಗನೇ ಹರಿಯ ಸನ್ನಿಧಿಯಲ್ಲಿ ನಿಲ್ಲೋರು ॥ ೯ ॥

ನೋಡಲು ಮಹಿಮೆಯನು ನೆರದವರೆಲ್ಲರು ।
ಕಡಲ ಶಯನನ ದಾಸರ ಭಾಗ್ಯವ ।
ಆಡಿದ ಮಾತಿಗೆ ಅಪರಾಧವಾಯಿತೆಮದು ।
ಪಿಡಿದು ಚರಣದಲ್ಲಿ ಹೊಡಹೊರಳುತಿಹ್ಯರು ॥೧೦॥

ನುಡಿವರು ದಾಸರು ಏನು ಅರಿಯವುಯೆಂದು ।
ಬಡವೆನಗೆ ಒಬ್ಬರಗೊಡವ್ಯಾತಕೆ ।
ಪೊಡವಿಗೊಡೆಯ ಗುರುಪುರಂದರವಿಠಲನು ।
ಮಾಡುವ ಚರಿತೆ ತಾನೊಬ್ಬ ಬಲ್ಲ ॥ ೧೧ ॥

**ಪದ : ೦೫** **ರಾಗ : ನೀಲಾಂಬರಿ, ತಾಳ : ಝಂಪಿ**

ವ್ಯಾಸಮುನಿರಾಯರ ದಾಸರೊಳು ಪುರಂದರ ।
ದಾಸರ ಮಹಿಮೆ ವರ್ಣಿಸಲಾರೆನವ್ವ ॥ ಪ ॥

ಮೂರುಲೋಕದ ಅರಸು ಶ್ರೀ ಭೂದುರ್ಗೆಯ ಸಹಿತ ।
ಧಾರುಣಿಯ ಮ್ಯಾಲೆ ಅವತರಿಸಿ ದಯಮಾಡಿ ।
ನಾರದರೆ ಯಿವರೆಂದು ಪುರಂದರದಾಸರಿಗೆ ।
ಕಾರುಣ್ಯದಿಂದ ಕಾಣಿಸಿ ಕೊಂಡನವ್ವ ॥ ೧ ॥

ಗಂಗೆ ಗೌತಮೆ ತುಂಗೆ ಮೊದಲಾದ ತೀರ್ಥಗಳು ।
ಶ್ರೀಂಗಾರವಾಗಿ ನಮಂಗಣದೊಳಗೆ ।
ರಂಗವಾಲಿಕ್ಕುತಲಿ ಮಂಗಳವ ಪಾಡುವದು ।
ಕಂಗಳಿಂದಲಿ ಕಂಡೆ ತಂಗಿ ಕೇಳವ್ವ ॥ ೨ ॥

ಹರಿದಾಸರ ಉದರದಲಿ ಜನಿಸಿವಾನು ।
ಗುರುವ್ಯಾಸರಾಯರ ಚರಣಗಳ ಕಂಡೆನೂ ।
ಪರಮ ಸಾರ್ಥಕವಾಯಿತೇ ದೇಹ ನರಜನ್ಮ ।
ಗುರುಪುರಂದರ ವಿಠಲನರಿತೆಯಿವರಿಂದ ॥ ೩ ॥

**ಪದ : ೦೬** **ರಾಗ : ಪಂತುವರಾಳಿ, ತಾಳ : ಅಟ್ಟ**

ಹೇಳಬ್ಯಾಡಮ್ಮ ನೀನು ದಾಸರ ಕೂಡ ।
ಹೇಳಬ್ಯಾಡ ವ್ಯಾಸರಾಯ ಬಂದಿದ್ದನೆಂದು ।
ಕಾಲಿಗೆ ಬೀಳುವೆ ಕರುಣಿಸಿ ದಯಮಾಡೆ ॥ ಪ ॥

ಹೀಗೆಂದು ಕೈಮುಗಿದು ಬ್ಯಾಗ ಭಕ್ತಿಯಿಂದ ।
ಆಗ ಪ್ರದಕ್ಷಿಣೆ ಮಾಡುತಲಿ ।
ಯೋಗಿ ಅವರ ಕಣ್ಣಿಲಿ ನೋಡಿ ಧೇನಿಸಿ ।
ಹೀಗೆ ಅನುದಿನ ಮಾಡುತಲಿಪ್ಪನು ॥ ೧ ॥

ಒಂದು ದಿನದಲ್ಲಿ ಪುರಂದರದಾಸರು ।
ಛಂದುಳ್ಳ ಕೆಸರ ಚಿನ್ಹಿತ ಪಾದಾರ ।
ವಿಂದಗಳನು ಕಂಡು ತಮ್ಮ ಸತಿಯ ಕೇಳಿ ।
ವಂದಿಸಿದರು ಗುರುಪಾದಗಳಿಗೆ ॥ ೨ ॥

ತರುಣಿಂದು ಆರು ಬಂದಿದ್ದರು ವ್ಯಾಸರಾ ।
ಯರ ಪದಗಳು ಗುರುತುಂಟು ಎನಗೆ ।
ಖರೆಯ ಅವರ ಪದಂಗಳಹುದೆಂದು ।
ಕರವ ಪಿಡಿದು ದಾಸರು ಕೇಳಿದರು ॥ ೩ ॥

ಸ್ವಾಮಿ ಕೇಳುವೆ ಸಾರಾಂಶವ ।
ಸ್ವಾಮಿರಾಯರು ತಾವು ನಿತ್ಯ ಬಂದು ।
ಪ್ರೇಮದಿಂದಲಿ ಪ್ರದಕ್ಷಿಣೆಯನು ಮಾಡುತ ।
ಸುಮ್ಮನಿರು ಹೇಳಬ್ಯಾಡೆಂದರೆನಗೆ ॥ ೪ ॥

ಹೀಗೆಂದ ನುಡಿಯನು ಕೇಳಿ ಶ್ರೀರಂಗನ ।
ಬ್ಯಾಗದಿಂದವನ ಪದವ ನೆನದು ।
ಆಗ ಗುರು ಪುರಂದರವಿಠ್ಠಲನ ದಾಸ ।
ನಾಗಿಹ್ಯ ವ್ಯಾಸರಾಯರ ತುತಿಸಿದರು ॥ ೫ ॥

**ಪದ : ೦೭** **ರಾಗ : ಕೇದಾರಗೌಳ, ತಾಳ : ಆದಿ**

ದಾಸರು ತಮ್ಮ ತಂದೆ ತಾಯಿ ತಿಥಿ ಬಂದರೆ ।
ವ್ಯಾಸರಾಯರು ಶ್ರೀ ಪಾದರಾಯರಿಗೆ ।
ಶ್ರೀಶನಾಜ್ಞೆಯಿಂದ ಬ್ರಾಹ್ಮಣಾರ್ಥಕೆ ಪೇಳಿ ।
ಲೇಸಾಗಿ ಮನೆಗೆ ಕರತಂದರು ॥ ಪ ॥

ಸ್ನಾನ ಸಂಧ್ಯಾನ ಜಪತಪಗಳ ಹರಿ ।
ಧ್ಯಾನವನು ದಾಸರು ಮಾಡಿದರು ।
ಮೌನಿ ವ್ಯಾಸರಾಯ ಶ್ರೀಪಾದರಾಯರು ।

ತಮ ತಮ್ಮಸ್ಥಾನದಿ ಸ್ನಾನವನು ।
ಧ್ಯಾನ ಸನ್ಯಾಸ ಕರ್ಮದ ವಿಧಿಗಳು ಸ ।
ನ್ಮಾನದಿಂದಲಿ ಮಾಡಿದರು ।
ದೀನರಕ್ಷಕನ ನಾಮವ ಸ್ಮರಿಸುತ ।
ಭಾನುತೇಜದಂತೆ ಪೊಳೆವುತಲಿ ॥ ೧ ॥

ವರಧ್ರುವನ ಅವತಾರ ಶ್ರೀಪಾದರಾಯರು ।
ಹರಿರಂಗ ವಿಠ್ಠಲನುಪಾಸಕರು ।
ತರುಳ ಪ್ರಹ್ಲಾದನವತಾರ ವ್ಯಾಸರಾಯರು ।
ಸಿರಿಕೃಷ್ಣನ ಉಪಾಸಕರು ।
ಹರಿಭಕ್ತ ನಾರದವತಾರ ದಾಸರು ।
ಪುರಂದರ ವಿಠಲನುಪಾಸಕರು ।
ಧರೆಯೊಳು ಮೂವರಿಗೆ ಸರಿಯಿಲ್ಲ ಇವರನ ।
ನರರೆಂದವರಿಗೆ ನರಕ ತಪ್ಪದು ॥ ೨ ॥

ಮೂವರಲಿ ದೇವರುಂಟೆಂದು ಆವಾಗ ।
ದೇವ ಬ್ರಹ್ಮೇಂದ್ರರು ನೋಡಬಂದರು ।
ದೇವಿ ಲಕುಮಿ ಭೂದೇವಿ ದುರ್ಗೆಯರ್ಬಂದು ।
ದೇವನುಣ್ಣಲನ್ನ ಮಾಡಿದರು ।
ದೇವಿ ಭಾಗೀರಥೀ ಯಮುನೆ ಸರಸ್ವತಿ ಗೋ ।
ದಾವರಿಯು ಬಂದು ಉದಕವ ಕೊಡಲು ।
ಭಾವಜ ಋಷಿ ತುಂಬುರ ನಾರದಾದ್ಯರು ।
ಪಾವಮಾನಿ ಗರುಡರು ಪಾಡುತಿರಲೂ ॥ ೩ ॥

ಆ ಸಮಯದಿ ದಾಸರು ಅಭಿಗರಿಸಿ ।
ಶ್ರೀವಾಸುದೇವಗೆ ನೈವೇದ್ಯವನಿಟ್ಟು ।
ವ್ಯಾಸರಾಯ ಶ್ರೀ ಪಾದರಾಯರ ಕೂಡಿಸಿ ।
ದಾಸರು ಜನಾರ್ದನಗರ್ಪಣೆಯೆನಲು ।
ಗ್ರಾಸವ ಕೊಳುತಲಿ ಕವಳಕವಳಕೆ ಶ್ರೀ ।
ಕೇಶವ ಗೋವಿಂದ ನರಸಿಂಹನೆನುತಾ ।
ದಾಸರಗಾನಕೆ ತನುಮರೆದು ಸಂ ।
ತೋಷದಿಂದ ಉಂಡು ತೆರಳಿದರು ॥ ೪ ॥

ಈ ಪರಿ ಅರ್ಚನೆಯಿಂದಲಿ ಸುಖದಿಂದ ।
ಆ ಪರಮಾತ್ಮನಪಾರ ಮಹಿಮೆ ।
ಭೂಪಕೃಷ್ಣರಾಯ ಬುಧ ಜನರಿಗೊಲಿದು ।
ವ್ಯಾಪಿಸಿ ಜಗದಿ ಖ್ಯಾತಿಯಿಂ ಮೆರೆದಾ ।
ತಾಪತ್ರಯಂಗಳ ತರಿದು ನಿವಾರಿಸಿ ।
ಶ್ರೀಪತಿ ಗುರು ಪುರಂದರವಿಠಲನಾ ।
ಶ್ರೀಪಾದ ಪದುಮವ ನೆನೆದು ಶ್ವೇತ ।
ದ್ವಿಪಾನಂತಾಸನ ವೈಕುಂಠ ಪತಿಯೆಂದು ॥ ೫ ॥

**ಪದ : ೦೮** **ರಾಗ :ಶಂಕರಾಭರಣ, ತಾಳ : ಆದಿ**

ಏನು ಹೇಳಲಯ್ಯ ದಾಸರ ಮಹಿಮೆ ।
ಬಣ್ಣಿಸಲಳವಲ್ಲ ಬುಧ ಜನರು ಕೇಳಿ ॥ ಪ ॥

ಘನವಾದ ಕಾರ್ತಿಕ ಶುದ್ಧ ಏಕಾದಶಿ ।
ಉಪವಾಸ ಜಾಗರ ಮಾಡಿ ದ್ವಾದಶಿಗೆ ।
ಮನ ಮುಟ್ಟಿ ಬಂದ ಬ್ರಾಹ್ಮಣರಿಗೆ ಭೋ ।
ಜನಕೆ ಬನ್ನೆಂದು ಪೇಳಿದರಾಗಾ ।
ರುಣೋದಯದಲೆದ್ದು ಸತಿಯ ।
ಸಂಜ್ಞೆಯ ಮಾಡಿ ಘೃತ ಕ್ಷೀರ ತರಹೋದರ್ಥಟ್ಟಿಗಳಿಗೆ ।
ಮನಸಿಜನ್ನೆಯ್ಯನ ಮನಮುಟ್ಟಿ ಭಕ್ತಿಲಿ ।
ನೆನದು ಏಕಚಿತ್ತದಲಿ ॥ ೧ ॥

ಗೋಲ್ಲ ಘೃತ ಕ್ಷೀರ ಕೊಡುವದೆಂದು ಬೇಡಲು ।
ನಿಲ್ಲೊಂದು ಕ್ಷಣ ಕೊಡುಥೇನೆನಲು ।
ಇಲ್ಲಿ ಕುಳಿತಿರುಥೇವೆಂದು ಕುಳಿತು ವಿ ।
ಠ್ಠಲನ ಧ್ಯಾನದಲ್ಲಿ ಮೌನಾದರು।
ಅಲ್ಲಿ ಒಂಭತ್ತು ತಾಸಾಗಲು ಎಚ್ಚತ್ತು ।
ಗೊಲ್ಲ ತಂದ ಕ್ಷೀರ ಕೊಂಡು ನಡಿಯೆ ।
ಇಲ್ಲಿ ಮನೆಯೊಳಗೆ ವಿಚಿತ್ರ ಮಾಡಿದ ಹರಿ ।
ಬಲ್ಲವರು ಕೇಳಿದಾಸರ ಮಹಿಮೆ ॥ ೨ ॥

ಅಪ್ಪಣ್ಣ ಭಾಗವತ ರೂಪದಿ ಸಾಮಾಗ್ರಿ ।
ವಿಪರೀತವಾಗಿ ತಂದೊಟ್ಟಿದನು ।

ಚಪಲದಲಿ ದಾಸರ ಸ್ತ್ರೀಯಾದಿ ಗೌತುಮಿಗೆ ।
ತಾ ಪೇಳಿದನು ಪಾಕವಾಗಲೆಂದು ।
ಅಪ್ಪ ಎನ್ನ ಕೈಲಾಗುವದೇ ಇಷ್ಟು ಪಾಕವೆನೆ ।
ಕೋಪದ ನುಡಿ ಕೇಳಿವಳಿತೆಂದು ।
ತುಪ್ಪದ ಬಿಂದಿಗಿ ತಂದೊಟ್ಟಿದನಾಗ ।
ಅಪ್ಪಣ್ಣ ಭಾಗವತರ ಮಹಿಮೆ ಕೇಳಿ ॥ ೩ ॥

ಆಗ ಶ್ರೀ ಭೂದುರ್ಗೆಯರ ಕೈ ನೈವೇದ್ಯವ ।
ಬ್ಯಾಗದಿ ಮಾಡಿಸಿದನಾಗ ।
ವೇಗದಲಿ ಬ್ರಹ್ಮ ರುದ್ರಾದಿ ದೇವರು ।
ಯೋಗಿ ವಶಿಷ್ಠ ಋಷಿಮುನಿಗಳೆಲ್ಲ ।
ಆಗ ಬ್ರಾಹ್ಮಣರ ರೂಪಧರಿಸಿ ಬಂದುಂಡು ।
ತೇಗಿ ಕೇಸರಿ ಗಂಧ ಪಚ್ಚಿಕೊಂಡು ।
ಹೀಗಾರು ಪಂಕ್ತಿಗಳು ಉಂಡು ಪೋದರಾಗ ।
ಸಾಗಿದಾಸರು ಬಂದರು ಕಡೆ ಪಂಕ್ತಿಗೆ ॥ ೪ ॥

ಕಂಭಾವತಿಯನುಟ್ಟು ಅಪ್ಪಣ್ಣ ಭಾಗವತ ಸ್ವರ್ನ ।
ಕುಂಭವಿಡಿದು ಘೃತ ಬಡಿಸುತಿರೆ ।
ಗಂಭೀರ ಸ್ವರ ಮಾಡಿ ಘೃತವ ಕೊಳ್ಳಿರೊ ಯೆಂದು ।
ರಂಭ ಪಾತ್ರೆಯೊಳು ತುಂಬುತಿರಲು ।
ಸಂಭ್ರಮಕೆ ಸರಿಯಿಲ್ಲ ದಾಸರ ಸ್ತ್ರೀಯಳಿಗೆ ।
ಅಂಬಾ ಅಂಬಾ ಎಂದು ಕರೆಯುತಲಿ ।
ಆಂಭ್ರ ಫಲಸೀ ಕರಣಿ ಬ್ರಾಹ್ಮಣರಿಗೆ ।
ಶಂಬರಾರಿಯ ಪಿತ ಬಡಿಸಿದನು ॥ ೫ ॥

ಅಷ್ಟರೊಳು ದಾಸರು ವಿಠಲನ್ನ ನೆನದು ।
ಗಜಪಟ್ಟಣದೊಳು ಮಗನ ಕೈ ವಿಡಿದು ।
ಥಟ್ಟನೆ ಬರುತಿರೆ ಬ್ರಾಹ್ಮರನು ಕಂಡೆ ಕೇಳೆ ।
ಇಷ್ಟು ಬ್ರಾಹ್ಮರು ಎಲ್ಯುಂಡರೆಂದು ।
ಅಷ್ಟದಿಕ್ಕನೆ ನೋಡಿ ಬ್ರಾಹ್ಮರು ಎಂದರಾಗ ।
ಇಷ್ಟು ನಿಮ್ಮನೆಯೊಳಗುಂಡೆವೆಂದೂ ।
ದಿಟ್ಟ ಮಾತನೆ ಕೇಳಿ ದಾಸರಾಶ್ಚರಿಯ ।
ಬಟ್ಟು ವಿಠಲನ್ನ ಮಹಿಮೆ ತಿಳಿಯದೆಂದರು ॥ ೬ ॥

ಬಲುಬ್ಯಾಗ ಮನಿಘೋಗಿ ಬಾಗಿಲೊಳ್ಪೊಕ್ಕು ವಿ ।
ಠಲನ ಸ್ಮರಣಿ ಮಾಡುತಲೀ ।
ಲಲಿತ ಸ್ವರವ ಕೇಳಿ ಅಪ್ಪಣ್ಣ ಭಾಗವತ ।
ಚಲುವ ತುಪ್ಪದ ಬಿಂದಿಗೆ ಇಳುಹಿ ಪೋದ ।
ಬಲ ಎಡ ನೋಡುತ ಬ್ರಾಹ್ಮಣರುಣವರೆಂದು ಮನ ।
ದಲ್ಲಿ ಸಂಭ್ರಮ ಬಟ್ಟರಾಗ ।
ಅಲ್ಲಿಂದ ತಮ್ಮ ಸ್ತ್ರೀಯಳ ಕರದು ಕೇಳಿ ।
ಹೇಳೆಂದು ಆಶ್ಚರಿಯಗೊಂಡರಾಗ ॥ ೭ ॥

ಪತಿ ಕುರಿತು ಸತಿ ನುಡಿಯೆ ।
ಅತಿ ಭಕುತಿಯಿಂದ ನಮಿಸಿ ।
ಅತಿ ವೇಗ ಅಪ್ಪಣ್ಣ ಭಾಗವತ ಕ್ಷೀರ ।
ಪತಿ ದ್ವಾದಶಿ ಸಮಾರಾಧನೆ ಆಗಲೆಂದು ।
ಪ್ರೀತಿಯಲೆ ಪೇಳಿದರು ನಿಮ್ಮಾ ।
ಪತಿಗಳೆಂತೆಂದು ಅತಿ ತೀವ್ರದಿ ಭೋಜನ ।
ಕ್ಷಿತಿಸುರರಿಗೆ ಮಾಡಿಸಿದನೆಂದು ।
ಸತಿ ನುಡಿಯಲು ಕೇಳಿ ಆತನ ಕರಯರೆನಲು ।
ಅತ್ತಿತ್ತ ನೋಡಲದೃಶ್ಯನಾದ ॥ ೮ ॥

ಕರೆಯಿರೈಯಪ್ಪಣ್ಣ ಭಾಗವತ ಎಂದೆನೆ ।
ತಿರುಗಿ ಕರೆಯಲು ಇಲ್ಲವೆಂದು ಪೇಳಿದರು ।
ಪರಮಾಶ್ಚರ್ಯವೆಂದು ಲೋಕವೆಲ್ಲ ನುಡಿಯೆ ।
ಹರಿಯ ಮಹಿಮೆ ತಿಳಿಯದೆಂದರಾಗ ।
ಅರಿಯವೈ ತುಪ್ಪದ ಬಿಂದಿಗಿಳುಹೀತಾ ।
ನದೃಶನಾಗಿ ಪೋದ ನೆಂತೆಂಬುದು ।
ತಿರುಗುತಿಹ್ಯ ಬ್ರಾಹ್ಮಣರ ಪಂಕ್ತಿಯೊಳು ।
ಅರಸಿ ನೋಡಲು ಕಾಣದಾದನೈಯ್ಯ ॥ ೯ ॥

ಧನ್ಯಧನ್ಯ ನಿಮ್ಮ ನಯನ ಧನ್ಯಧನ್ಯ ।
ಧನ್ಯಧನ್ಯ ನಿಮ್ಮ ಕಾಯ ಧನ್ಯಧನ್ಯ ।
ಧನ್ಯಧನ್ಯ ನಿಮ್ಮ ಜೀವ ಧನ್ಯಧನ್ಯ ।
ಧನ್ಯಧನ್ಯ ನಿಮ್ಮ ಮನವು ಧನ್ಯಧನ್ಯ ।
ಧನ್ಯಧನ್ಯ ನಿಮ್ಮ ಶ್ರವಣ ಧನ್ಯಧನ್ಯ ।
ಧನ್ಯಧನ್ಯ ನಿಮ್ಮ ಜಿಹ್ವೆ ಧನ್ಯಧನ್ಯ ।

ಧನ್ಯಧನ್ಯ ನಿಮ್ಮ ನುಡಿಯು ಧನ್ಯಧನ್ಯ ।
ಧನ್ಯಧನ್ಯ ನಿಮ್ಮ ಆತ್ಮವೆಂದರು ॥ ೧೦ ॥

ಸತಿಸುತ ಮಿತ್ರರಿಂ ಕಡಿಮ್ಯಾದಿನೆರತಿ ।
ಪತಿಪಿತ ಅವರ ಕಣ್ಣಿಗೆ ಬೀಳುವೆ ।
ಪತಿತ ಪಾವನ ನೀನಹುದ್ಯೈಯ್ಯ ಕ್ಷಿತಿಯೊಳು ।
ಅತಿ ಪಾಮರ ಅಗ್ರಗಣ್ಯಾ ನಾನು ।
ಪತಿತ ಪಾವನನೆಂದು ಶ್ರುತಿಗಳೊದ ।
ರುತಿವೆನುತ ಸ್ತೋತ್ರವ ಮಾಡಲು ದಾಸರು ।
ಅತಿ ಭಕುತಿಯಿಂದ ಕೇಳಿ ಅಖಿಳ ಜನರು ಮು ।
ಕುತಿ ಐದುವರೆ ದಾಸರ ಮಹಿಮೆಯನು ॥ ೧೧ ॥

ಇದು ಒದಿದವರಿಗೆ ಯಿದು ಕೇಳಿದವರಿಗೆ ।
ಯದುಕುಲೋತ್ತಮ ಹರಿಯು ದಯ ಮಾಡುವ ।
ಇದು ಬರೆದವರ ಮನೆಯೊಳಗಿದ್ದಡೆ ।
ಒದಗಿ ಸಿರಿ ಸಂಪತ್ತು ಹೆಚ್ಚುವದು ।
ಇದಕೆ ಸಂಶಯವಿಲ್ಲ ಅಪದ್ಧವೆಂದರೆ ।
ಒದಗಿ ಶಿಕ್ಷಿಸುವ ಯಮರಾಯನು ।
ಸದಯದಲಿ ಗುರುಪುರಂದರವಿಠ್ಠಲ ।
ಹೃದಯದೊಳು ವಾಸವಾಗಿ ಕುಣಿವ ॥ ೧೨ ॥

**ಪದ : ೦೯** **ರಾಗ : ಕೇದಾರಗೌಳ, ತಾಳ : ಝಂಪಿ**

ವಾಸುದೇವನ ಚರಣಕಮಲ ವಂದಕನೆ ।
ಸನ್ಯಾಸ ಕುಲರತುನ ಗುರುವ್ಯಾಸಮುನಿರಾಯ ॥ ಪ ॥

ವಾದಿಗಜಸಿಂಹ ದುರ್ವಾದಿ ಮೃಗ ಭೈರುಂಡ ।
ವಾದಿಫಣಿಗರುಡ ತತ್ವಾದಿ ರಚಿತ ।
ವಾದಿಭಯಂಕರನೆ ಪರವಾದಿ ಕೋಲಾಹಲನೆ ।
ವಾದಿಮಸ್ತಕ ಶೂಲ ಮಧುರ ಗುಣಶೀಲ ॥ ೧ ॥

ವೈಷ್ಣವೋತ್ತಮ ಸದ್ವೈಷ್ಣವ ವ್ರಜಾನಂದ ।
ವೈಷ್ಣವಾಗಮಭರಿತ ವೈಷ್ಣವ ಪ್ರಿಯ ।
ವೈಷ್ಣವ ಕಮಲ ಸೂರ್ಯ ವೈಷ್ಣವ ಕುಮುದ ಚಂದ್ರ ।
ವೈಷ್ಣವ ಕುಲೋತ್ಕೃಷ್ಟ ವಿಷ್ಣುಪರನೆಂದು ॥ ೨ ॥

ಹರಿಯಲ್ಲದನ್ಯತ್ರ ಅರಿಯದ ಮಹಾಮಹಿಮ ।
ಹರಿಪಾದಯುಗಳ ಸರಸೀರುಹ ಭೃಂಗ ।
ಗುರುಪುರಂದರವಿಠಲ ಪರದೈವ ವೆಂದರುಹಿ ।
ಧರೆಯೊಳು ಸುಜನರ ಪೊರೆದೆ ಗುರುವ್ಯಾಸ ಮುನಿ ॥ ೩ ॥

**ಪದ : ೧೦** **ರಾಗ : , ತಾಳ :**

ಆರು ನಿಮಗೆದಿರು ಬೊಮ್ಮಾಂಡದೊಳಗೆ ।
ಸಮರ ಧೀರ ರಾಮನಬಂಟ ವೀರಹನುಮಂತಾ ॥ಪ॥

ಕೊಂಕದೆ ಜಲನಿಧಿಯ ಅಘಮೆಯಲಿದಾಂಟಿ ।
ಅಕಳಂಕ ರಾಮನ ಬೆರಳ ಮುದ್ರಿಕೆಯನೂ ।
ಅಂಕವಿಲ್ಲದೆ ಜಾನಕಿಗಿತ್ತು ಸಂತೈಸಿ ।
ಲಂಕೆಯನುರುಹಿದ ನಿಶ್ಯಂಕ ಹನುಮಂತ ॥ ೧ ॥

ಅಸುರಬಲ ವಾನರರ ಕುಸುರಿದರಿಯಲು ಭವಾ ।
ದಿಂದ ಸಂಜೀವನವ ತಂದೆ ।
ಅಸುವಿತ್ತು ವಾನರರಿಗಾಗಿಯಲತ್ತ ದ ।
ಮ್ಮಿಸಿ ನಿರು ನಿಲಸಿದಿಯ್ಯೊ ಅಸಮಹನುಮಂತಾ ॥೨॥

ಅಂಡಲಿದು ದಶವದನನ ಸುರ ಬಲಗಳ ಕಡಿ ।
ಖಂಡ ತುಂಡವ ಮಾಡಿ ಕಲಿರಾವಣನ ।
ದಂಡಿಲೊಬ್ಬರ ಸಾಯದಂತೆ ಸಾಧಿಸಿ ಬಳರ ।
ದಿಂಡುಗೆಡಹಿದೆಲೊ ಉದ್ದಂಡ ಹನುಮಂತಾ ॥ ೩ ॥

ಪರರಿಗಸದಳವೆನಿಪ ಬಲವ ನೋಡದೆ ಬಂದೆ ।
ಶಿರನೂರು ಕಡೆಯಲ್ಲಿ ಕ್ಷಿತಿಗೆ ಬೀಳೆ ।
ಅರಸರಾಮನ ಪಂಥ ಕಡ್ವಾಲಾದೆನು ಎನುತ ।
ನಿಲಿಸಿದಿಯೊ ಧುರದಿ ಉದ್ಧರದಿ ಹನುಮಂತಾ ॥೪॥

ಭೂಮಿ ಜಾತೆಯ ಮುಖಾಂಬುಜ ಮಿತ್ರನಾದ ಶ್ರೀ ।
ರಾಮ ಗುರುಪುರಂದರವಿಠ್ಠಲರೇಯಾ ।
ಕಾಮ್ಯಾಚ್ಯ ಬೇಡೆನಲು ತವ ಪಾದಾಂಬುಜದಿ ಸು ।
ಪ್ರೇಮ ಸಾಕೆಂದು ನಿಸ್ಸೀಮ ಹನುಮಂತಾ ॥ ೫ ॥

ಪದ : ೧೧ ರಾಗ : ಸಾವೇರಿ, ತಾಳ : ಝಂಪಿ

ಸೋಮಕುಲ ವಾರಿನಿಧಿ ಸೋಮನುದ್ಧಾಮ ರಣ ।
ಭೀಮ ಜಯಭೀಮ ಜಯಜಯಭೀಮಸೇನ ॥ ಪ ॥

ಮರಸಿ ಕೌರವನಿತ್ತ ವಿಷ ಉಂಡು ತೇಗಿ ಹಸಿ – ।
ದುರಗಗಳ ಮೇಲೆ ಬಿಡಲವನೊರಸಿದೆ ।
ಸುರನದೀಯೊಳು ನೂಕೆ ಭರದಲೆದ್ದಾ ಖಳನ ।
ಪರಿಪರಿಯ ಭಂಗ ಬಡಿಸಿದಿಯಲೆ ಭಾಪುರೆ ॥ ೧ ॥

ಬಿಡದೆ ಪುರ್ಲೋಚನ ಲಕ್ಷಾಗೃಹದಿ ಸಹಾನುಜರ ।
ಸುಡಿಸಿ ಸಹೋದರರ ಕಡಿಗೆ ತೆಗದೇ ।
ಹಿಡಂಬಕನ ಶೀಘ್ರ ಸಂಹರಿಸಿ ಹಿಡಂಬಕಿಯಲ್ಲಿ ।
ವಡನೆ ಘಟೋತ್ಕಚನ ನೀಪಡದೆಲ್ಯೆ ಭಾಪುರೆ ॥ ೨ ॥

ಏಕಚಕ್ರ ಪುರದಿ ವಿಪ್ರನು ಕ್ಲೇಶಿತನಾಗೆ ।
ನೀ ಕೇಳಿ ಬಕನ ಸಂಹರಿಸಿ ಬಿಸುಟೇ ।
ಲೋಕ ಕಪ್ಪವ ಕೊಡಲು ಶ್ರೀಪತಿಗೆ ಸಮರ್ಪಿಸಿದೇ ।
ಲೋಕ ಪೂಜಿತನಾಗಿ ಮೆರದೆಲೆ ಭಾಪುರೆ॥ ೩ ॥

ದ್ರುಪದ ಸ್ವಯಂವರಮಾಡೆ ಸಕಲರಾಯರು ಬಂದು ।
ನೃಪರಿಂದ ಧನುವ ಪೂರೈಸದಿರಲು ।
ಕಪಟ ವಿಪ್ರನ ವೇಷದಿ ಶಲ್ಯನ ಗಗನಕೆ ಬಿಸುಟಿ ।
ನಿಪುಣತನದಿಂದದನು ಕೆಳಗಿಟ್ಟೆಲೆ ಭಾಪುರೇ ॥ ೪ ॥

ನರ ಮಾಗಧೇಶನೀಕರಿಸಿ ನಿನ್ನನು ರಣಕೆ ।
ಕರಸೆ ಹರಿಯದುರಿಲಾಖಳನ ಮುರಿದೇ ।
ಧರೆಯೊಳತಿ ಬಲವಂತ ಕೀಚಕ ಸಾಹನುಜರನು ।
ಮುರಿದು ಮುಟ್ಟಿಗೆಯ ಮಾಡಿದೆಲ್ಯೆ ಭಾಪುರೆ ॥ ೫ ॥

ದ್ರೌಪದಿಗೆ ಸೌಗಂಧಿ ಕುಸುಮವನು ತರುಹೋಗ ।
ಲಾ ಪಥದಿ ಮಣಿಮಂತ ಕಿರ್ಮಿರಾಖಳರಾ ।
ಕೋಪದಿಂದವನ ಸಂಹರಿಸಿ ಸೌಗಂಧಿಕವ ।
ಶ್ರೀಕೃಷ್ಣಗೆ ಸಮರ್ಪಿಸಿದೆ ಭೀಮ ಭಲಾ ಭಾಪುರೆ ॥೬॥

ನರನಮಿತ ಗುರುರಥವ ತಿರುಹಿ ನಭಕೀಡ್ಯಾಡಿ ।
ಕುರುಭೂಪನನುಜರಾ ಕೊಸರಿ ಜರಿದೆ ।
ಹರಿಯಶರಕೆದಿರಾದಿ ಗಿರಿಶನವತಾರದ ।
ಗುರುಸುತನ ಭಂಗ ನೀ ಬಡಿಸಿದೆಲೆ ಭಾಪುರೆ ॥ ೭ ॥

ದುರುಳ ದುಶ್ಯಾಸನ್ನ ಧರಿಯಮೇಲೆಡ ಗೆಡಹಿ ।
ಯರಡುದಳದಾರಥಿಕರನ್ನು ಜರಿದೆ ।
ನರಹರಿಯ ಲೀಲೆಯಿಂದವನುರವ ಬಗೆದು ವಿಡಿ ।
ಕರುಳ ನಿಜ ಸತಿಗೆ ಮುಡಿಸಿದೆಲೆ ಭಾಪುರೆ ॥ ೮ ॥

ಕುರುಪತಿ ಯಮಜ ಪಾರ್ಥನಕುಲಸಾಹದೇವರನು ।
ಜರಿದು ನಿನ್ನನು ಸಂಗರಕೆ ಕರಿಯಲು ।
ಧರೆ ಭಾರನಿಳುಹಿ ಗುರುಪುರಂದರವಿಠಲನಿದಿರಿ ।
ಉರವಣಿಸಿದಾಖಳನಾ ಮುರಿದೆಲ್ಯೆ ಭಾಪುರೆ ॥ ೯ ॥

**ಪದ : ೧೨** **ರಾಗ : ಮೋಹನ, ತಾಳ : ಅಟ್ಟ**

ಹನುಮ ನಮ್ಮ ತಾಯಿ ತಂದೆ ।
ಭೀಮ ನಮ್ಮ ಬಂಧು ಬಳಗ ।
ಆನಂದ ತೀರ್ಥರೇ ನಮಗೆ ಗತಿ ಗೋತ್ರರಯ್ಯಾ ॥ ಪ ॥

ತಾಯಿ ತಂದೆ ಅಸುವಿಗಾಗಿ ಸ ।
ಹಯವಾಗಿ ವದಗುವಂತೆ ।
ಆಯಾಸವಿಲ್ಲದೆ ಸಂಜೀವನವ ತಂದೆ ।
ಘಾಯಕೊಂಡ ಕಪಿಗಳನ್ನು ।
ಸಾಯದಂತೆ ಮಾಡಿ ಪೊರೆದೆ ।
ಶ್ರೀರಾಮನಂಘ್ರಿಗಳೇ ಸಾಕ್ಷಿ ತ್ರೇತಾಯುಗದಲ್ಲಿ ॥ ೧ ॥

ಬಂಧು ಬಳಗದಂತೆ ಇದ್ದು ಆಪ ।
ದ್ಭಾಂದವನಾಗಿ ಪಾರ್ಥಗೆ ।
ಬಂದ ಬಂದ ದುರಿತಂಗಳ ಪರಿಹರಿಸಿ ।
ಅಂಧಕಾಜಾತರ ಕೊಂಡು ।
ನಂದನಂದಾರ್ಪಣೆ ಮಾಡಿ ।
ಯದುಕುಲನಂಘ್ರಿಗಳೇ ಸಾಕ್ಷಿ ದ್ವಾಪರಯುಗದಲ್ಲಿ ॥೨॥

ಗತಿ ಗೋತ್ರರಂತೆ ಸಾಧು ।
ಮತಿಗಳಿಗೆ ಗತಿಯನಿತ್ತು ।
ಮತಿಗೆಟ್ಟ ಇಪ್ಪತ್ತೊಂದು ಮತವ ಖಂಡ್ರಿಸಿ ।
ಮಿತಿಯಿಲ್ಲದ ಸದ್ವೈಷ್ಣವರಿಗೆ ।
ಗತಿಯಾ ತೋರಿದ ಪರಮಾತ್ಮ ।
ಯತಿ ಗುರುಪುರಂದರವಿಠಲನೆ ಸಾಕ್ಷಿ ಕಲಿಯುಗದಲ್ಲಿ ॥ ೩ ॥

**ಪದ : ೧೩** **ರಾಗ : ಭೈರವಿ, ತಾಳ : ಝಂಪಿ**

ಆರೆದಿರೋ ಮೂಜಗದೊಳು ।
ಸುರರಗುರು ಮಾರುತವತಾರ ಮಧ್ವಮುನಿಗೆ ॥ ಪ ॥

ಭೂಸುರರ ಕುಲದಲುದಿಸೀ ಬದರಿಯಲಿ ।
ವ್ಯಾಸ ನಾರಾಯಣನ್ನಾ ಕಂಡು ।
ತಾ ಶಿಷ್ಯನಾಗೆವರಿಗೆ ಮುದದಿಂದ ।
ಭಾಸುರ ಶಾಸ್ತ್ರವನೋದಿದಾ ಮುನಿಗೆ ॥ ೧ ॥

ತಾಮಸರು ತಮೋ ಯೋಗ್ಯರು ರಾಜಸರು ।
ಭೂಮಿ ಸ್ವರ್ಗಾ ನರಕದಾಲವರು ।
ಆ ಮುಕ್ತಿಯೋಗ್ಯ ಸತ್ವಾಜೀವಿಗಳ ।
ಪ್ರೇಮದಲಿ ಪೊರಿಯ ಬಂದಾ ಮುನಿಗೆ ॥ ೨ ॥

ಭಾಗವತವರ ಗೀತಿಗೆ ತಾತ್ಪರಿಯ ।
ರಾಗದಿಂದಲಿ ರಚಿಸಿದಾ ಮುದದೀ ।
ಆಗಮದ ತಂತ್ರ ಸಾರಾ ಕೃಷ್ಣಾಮೃತ ।
ಮಹರ್ಣವನು ರಚಿಸಿ ಮೆರದ ಮುನಿಗೆ ॥ ೩ ॥

ಅಣುವ್ಯಾಖ್ಯಾನ ನ್ಯಾಯ ವಿವರಣವನು ।
ಅಣು ವೇದಾಂತಸಾರಾ ಪೇಳಿ ।
ಪ್ರಣವಕಲ್ಪ ದ್ವಾದಶ ಸ್ತೋತ್ರವನೂ ।
ವಿನಯದಿಂದಲೆ ಬೆರಸಿದ ಮುನಿಗೆ ॥ ೪ ॥

ದಶ ಉಪನಿಷತ್ತುಗಳಿಗೆ ಭಾಷ್ಯಗಳ ।
ದಶ ಸುಪ್ರಕರಣವನ್ನು ಮಾಡೀ ।

ಅಸದರಿಶ ಋಗ್ಭಾಷ್ಯವಾ ರಚಿಸಿತಾ ।
ವಸುಧಿಯೊಳಗಿಟ್ಟು ಮೆರೆದಾ ಮುನಿಗೆ ॥ ೫ ॥

ವ್ಯಾರೆಯಲಿ ನಿತ್ಯ ನಡವಾ ಶ್ರೀಸದಾ ।
ಚಾರ ಸ್ತುತಿಯನ್ನು ಮಾಡೀ ಮುದದೀ ।
ಭೂರಿ ಯೋಗಿಗಳರ್ಥದ ಆ ಯಮಕ ।
ಭಾರತವರಚಿಸಿ ಮೆರೆದಾ ಮುನಿಗೆ ॥ ೬ ॥

ನರಸಿಂಹ ನಖ ಸ್ತೋತ್ರವಾ ಕೃಷ್ಣನಾ ।
ವರಜಯಂತಿಯನಂದವೂ ಪೇಳಿ ।
ಪರಿಪೂರ್ಣ ಭಾಗವತದಾ ತಾತ್ಪರಿಯಾ ।
ಕರುಣದಿಂದಲಿ ರಚಿಸೀದಾ ಮುನಿಗೆ ॥ ೭ ॥

ವರ ಶ್ರೀಮದ್ಭಾಷ್ಯವನ್ನೂ ಪರಿಪೂರ್ಣ ।
ಭಾರತದಾ ತಾತ್ಪರಿಯವಾ ರಚಿಸೀ ।
ಕರುಣದಿಂದಲಿ ಪೇಳಿದ ಪರಮಗುರು ।
ಹರಿಭಕ್ತನಾದ ಮಧ್ವಾಮುನಿಗೆ ॥ ೮ ॥

ತಾರತಮ್ಯಾನುಸಾರದಿಂದಲಿ ।
ಆ ರಮ್ಮೆ ಬ್ರಹ್ಮ ಗರುಡಾ ಫಣಿಪಾ ।
ಮಾರಹರ ಮೇಷ ವೃಕ್ಷಣಾದ್ಯಾದಿ ಸುರ ।
ಶ್ರೀರಾಮನನುಗರೆಂದಾ ಮುನಿಗೆ ॥ ೯ ॥

ಸುಗುಣ ಸುಜ್ಞಾನ ಹರಿಯಾನಿರ್ದೋಷ ।
ಜಗಜನ್ಮಾದಿ ಮುಖ್ಯಕರ್ತಾ ।
ಅಗಣಿತಾಗುಣ ರೂಪಕೆ ಅವಯವಕೆ ।
ಅಗಲದಲೆ ಐಕ್ಯವೆಂದಾ ಮುನಿಗೆ ॥ ೧೦ ॥

ಸಕಲ ವೇದಾಂತಗಳಿಗೆ ಭಾಷ್ಯಗಳ ।
ಸಕಲಾರ್ಥಗಳನು ಮಾಡಿ ಮುದದಿ ।
ಭಕತರನ ಹೊರವ ಗುರುಪುರಂದರ ।
ವಿಠಲನ ದಾಸ ಮಧ್ವಾಮುನಿಗೆ ॥ ೧೧ ॥

**ಪದ : ೧೪** **ರಾಗ : ಸಾವೇರಿ, ತಾಳ : ಅಟ್ಟ**

ಕೃಷ್ಣೇತಿ ಮಂಗಳ ನಾಮಾ ಯೆಂ ।
ಬಿಷ್ಣರೊಳಗೆ ಭವಬಂಧ ನಷ್ಟವಾಗಿ ಹೋಯಿತು ॥ಪ॥

ನಾರದಮುನಿ ತಾನು ನರಕಪಟ್ಟಣಕೆ ಹೋಗಿ ।
ವಾರಿಜೋದ್ಭವಪಿತನೆಂದು ವದರಲಾಗ ।
ಘೋರಪಾತಕವೆಲ್ಲ ದೂರಾಗಿ ಹೋಯಿತು ।
ಸೂರೆಗೊಂಡರು ಸ್ವರ್ಗಲೋಕಗಳನು ॥ ೧ ॥

ಅಜಾಮಿಳನು ಈ ನಾಮ ಅಂತ್ಯಕಾಲದಿ ಸ್ಮರಿಸೆ ।
ನಿಜ ಮುಕ್ತಿ ಪೊಂದಿದನು ನಿಮಿಷದೊಳಗೆ ।
ಭುಜಗಭೂಷಣನು ಶ್ರೀರಾಮನಾಮವನು ತನ್ನ ।
ನಿಜಕಾಂತೆಗುಪದೇಶವಿತ್ತ ನಾಮ ॥ ೨ ॥

ಸರೋವರದಲಿ ಮುಳಿಗಿ ಅರಿಯ ಬಾಧೆಗೆ ಸಿಲಕಿ ।
ಕರಿರಾಜ ಹರಿಯೆಂದು ವದರಲಾಗ ।
ಸಿರಿಗೆ ಹೇಳದೆ ಬಂದು ಕರಿಯ ಕಾಯ್ದನು ದೇವ ।
ಕರಿರಾಜ ವರದನೆಂದೆನಿಸಿಕೊಂಡ ನಾಮಾ ॥ ೩ ॥

ಧ್ರುವನು ತಂದೆಯ ತೊಡೆಯಮೇಲೆ ತಾನು ಕುಳಿತಿರಲು।
ಅವನ ಮಲತಾಯಿ ಬೈದು ಅಡವಿಗೆ ನೂಕಲು ।
ಸಕಲ ಸಂಪದ ಬಿಟ್ಟು ಹರಿಯನ್ನು ಭಜಿಸೆ ।
ಸ್ಥಿರವಾದ ಧ್ರುವ ಪದವಿಯೈದಿದಿ ನಾಮಾ ॥ ೪ ॥

ಕಂದನಪರಾಧವನು ಕೇಳದೆ ನೃಪ ತಾನು ।
ಕಡುದಾರುಣವಾದ ತೈಲದೊಳು ನೂಕಿಸೆ ।
ಕಳವಳಿಸಿ ಕೃಷ್ಣ ಕೃಷ್ಣಾಯೆಂದು ಮೊರೆಯಿಡಲು ।
ಕಾದಿದ್ದ ಎಣ್ಣೆ ತಣ್ಣಗಾದ ನಾಮ ॥ ೫ ॥

ಪಾಷಾಣವಾಗಿ ಬಿದ್ದಿರಲು ಪೃಥ್ವಿಯ ಮೇಲೆ ಪ ।
ತಿ ಶಾಪದಿಂದ ಕಾಲವನು ಕಳೆದು ಪಾದರೇ ।
ಣು ಸೋಂಕೆ ಪಾವನ್ನೆಯಾದಳು ದೇವ ।
ಶಿಲೆಯನುದ್ಧರಿಸಿದ ಶ್ರೀ ರಾಮನಾಮಾ ॥ ೬ ॥

ಅಸುರಕಪಟಕೆ ಸಿಲುಕಿ ।
ಅಶೋಕವನದಲಿ ಹೃದಯದಲಿ ಬೀಜ ಮಂತ್ರವ ಜ ।
ಪಿಸಲು ರಾಮಮುದ್ರಿಕೆಯಿತ್ತು ಶೋಕವನು ಬಿ ।
ಡಿಸಿದ ಜಾನಕೀರಮಣ ಶ್ರೀರಾಮ ॥ ೭ ॥

ಅಂಬರೀಶನು ತಾನು ದ್ವಾದಶೀ ವ್ರತವೆಂದು ।
ಸಂಭ್ರಮದಿಂದ ಸಾಧಿಸುತ್ತಿರಲು ಅಂದು ದೂರ್ವಾಸಮುನಿ।
ಬಂದು ಶಾಪವ ಕೊಡಲು ಆ ।
ನಂದದಿಂ ಚಕ್ರದಿ ಕಾಯ್ದ ನಾಮಾ ॥ ೮ ॥

ಹಿರಣ್ಯಕಶ್ಯಪ ತನ್ನ ಮಗನಬಾಧೆಯ ಪಡಿಸಿ ।
ಗಿರಿಯ ಗಂಹ್ವರದೊಳಗೆ ವೋಡಿಸೆ ।
ನರಹರಿಯೆ ರಕ್ಷಿಸು ರಕ್ಷಿಸೆಂದೆನಲಾಗ ।
ನರಸಿಂಹ ರೂಪದಿಂದ ಕಾಯ್ದ ನಾಮಾ ॥ ೯ ॥

ಪರಿಪರಿಯಲಿ ಭಕ್ತರನು ಪಾಲಿಸಿದುದೀ ನಾಮ ।
ಪರಮ ಮಂಗಳವು ಶ್ರೀ ರಾಮನಾಮ ।
ಬ್ರಹ್ಮಾದಿಗಳು ಬಿಡದೆ ಸ್ತೋತ್ರ ಮಾಡುವ ನಾಮ ।
ಧರೆಯೊಳಗೆ ಗುರುಪುರಂದರವಿಠಲ ನಿಮ್ಮನಾಮ॥ ೧೦ ॥

**ಪದ : ೧೫** **ರಾಗ : ಶಂಕರಾಭರಣ, ತಾಳ : ತ್ರಿವಿಡಿ**

ಕರದು ಮುದ್ದಿಸುವ ಗೋಪಿಯ ಭಾಗ್ಯಕ್ಕೆಣೆಯುಂಟೆ ।
ಗುರುಕುಲಾಂಬುಧಿಚಂದ್ರ ಕೃಷ್ಣ ಬಾಬಾ ಎಂದು ॥ ಪ ॥

ಸವ್ಯಹಸ್ತದಿ ಅಪಸವ್ಯ ಕರವ ಪಿಡಿದು ।
ನವ್ಯ ಸುಧಾಂಗುಲಿ ಸರಿವುತಲೀ ।
ಅವ್ಯಕ್ತ ಮಧುರೋಕ್ತಿಗಳಿಂದಲಾಡುವ ।
ಭವ್ಯ ಮೂರುತಿ ಕೃಷ್ಣ ಪರಮಪುರುಷನೆಂದು ॥ ೧ ॥

ಒಂದು ಕುಚಿವನುಣುತ ಮತ್ತೊಂದು ಕುಚವಪಿಡಿದು ।
ಸಂದಿಸಿ ಮೊಗವನಾ ತೋರಿಸುತಾ ।
ಚಂದಾದಿ ಕಿರಿನಗೆಯಿಂದ ಬೊಮ್ಮಂಡವ ।
ಅಂದುಬಾಯೊಳುತೋರ್ದ ಕೃಷ್ಣಾ ಬಾಬಾಯಂದು ॥೨॥

ಆನೆ ಬಂತೊಂದಾನೆಯೆನಲು ತೊಡೆಯಲ್ಲಿ ।
ನೀ ನೀಟಿಸೆ ಲೋಕಂಗಳು ಬೆರಗಾಗುತ ।
ಜ್ಞಾನ ನಿಧಿಯೆ ಗುರುಪುರಂದರವಿಠಲ ಇ ।
ದೇನೂ ನಿನ್ನಮಹಿಮೆ ನಾನೇನರಿಯೆನೆಂದು ॥ ೩ ॥

**ಪದ : ೧೬** **ರಾಗ : ತೋಡಿ, ತಾಳ : ಆದಿ**

ಅಳುವದ್ಯಾತಿಕು ರಂಗ ಅತ್ತರಂಜಿಸುಗುಮ್ಮ ।
ನಳಿನನಾಭನ ಪಾಡಿ ಪೊಗಳುತಿರಲು ಶರಗ ।
ಪಿಡದಪ್ಪಿ ಗೋಪಿಯ ಕೃಷ್ಣ ॥ ಪ ॥

ಹುಟ್ಟಿದೇಳು ದಿನ ದುಷ್ಟ ಪೂತನಿಯ ಕೊಂದೆ ।
ಮುಟ್ಟಿ ಮೊಲೆಹಾಲನುಂಡ ಕಾರಣದಿಂದ ।
ದೃಷ್ಠಿ ತಾಕಿತೋ ನಿನಗೆ ರಂಗಯ್ಯ ॥ ೧ ॥

ಬಾಲಕತನದಲ್ಲಿ ಗೋವಳರೊಡಗೂಡಿ ।
ಕಾಳಿಯ ಮಡುವನು ಕಲಕಿದಿ ಕಾರಣ ।
ಹಾಚು ಕಚ್ಚಿತೊ ನಿನಗೆ ರಂಗಯ್ಯ ॥ ೨ ॥

ಕರುವ ಕಾಯಲಿ ಹೋಗಿ ಭರದಿಂದ ಮಳೆಗರೆಯೇ ।
ಬೆರಳಲಿ ಬೆಟ್ಟವನೆಗಹಿದ ಕಾರಣ ।
ಬೆರಳುಳಕಿತೊ ನಿನಗೆ ರಂಗಯ್ಯ ॥ ೩ ॥

ವಸುದೇವನ ಸುತನಾಗಿ ಅನೇಕ ದೈತ್ಯರ ನೀಗಿ ।
ಹೆಸರಿಗೆ ಮಲ್ಲರ ಮಡುಹಿದ ಕಾರಣ ।
ಕಿಸರಾಯಿತೊ ನಿನಗೆ ರಂಗಯ್ಯ ॥ ೪ ॥

ಶರಣೆನ್ನಿ ಬೇಲಾಪುರದ ಚಲುವ ಚನ್ನಿ ।
ಗರಾಯಗೆ ಶರಣರ ಸತತದಿ ।
ಕರುಣಿಸಿ ಕಾವಾ ಗುರುಪುರಂದರ ವಿಠಲ ॥ ೫ ॥

**ಪದ : ೧೭** **ರಾಗ : , ತಾಳ :**

ಆರೆ ಬಂದವರು ಕೃಷ್ಣನಲ್ಲಾದಾರೆ ಬಂದವರು ॥ ಪ ॥

ಹೆಜ್ಜೆಗಳಿವು ನಮ್ಮ ಮನೆಯಲ್ಲಿ ಕಾಲು ।
ಗೆಜ್ಜೆಯ ಧ್ವನಿ ಕೇಳಾ ಬರುತಲಿದೆ ।

ವಜ್ರ ಮಾಣಿಕವೆಲ್ಲಾ ಜರಿದು ಬಿದ್ದಿದೆ ।
ಮಜ್ಜಿಗೆ ವಳಗಿನ ಬೆಣ್ಣೆ ಕಾಣಮ್ಮಾ ॥ ೧ ॥

ಕಂಬುಕೊಳಲು ನಮ್ಮ ಮನೆಯಲ್ಲಿ ದಿವ್ಯ ।
ಗಂಬೂರ ಕಸ್ತೂರಿ ಪುನಗು ಯಸವುತಾ ।
ಹೊಂಬಣ್ಣದ ಚಲ್ಲಾಣವೆಲ್ಲಾ ತೋಯ್ದಿದೆ ।
ಕುಂಭ ವಡದು ಹಾಲು ಹರದಿದೆಯವ್ವಾ ॥ ೨ ॥

ಮಿಂಚಿನ ಹೊಳಹಿ ನಂದದಿ ಬಂದು ನಮ್ಮ ।
ಸಂಚಾರವನೆಲ್ಲ ತಿಳಿವುತಲೀ ।
ಚಂಚಲಾಕ್ಷಿಯರ ಮನಸೂರೆಗೊಂಡು ।
ಲಂಚಗೂಳಿ ಗುರುಪುರಂದರವಿಠಲಾ ॥ ೩ ॥

ಪದ : ೧೮ ರಾಗ : ಜಂಜೂಟಿ, ತಾಳ : ಆದಿ

ರಾಮಕೃಷ್ಣರು ಮನೆಗೆ ಬಂದರು ಬಾಗಿಲ ತೆಗಿಯಿರೊ ।
ಕಾಮಧೇನು ಬಂದಂತಾಯಿತು ಫಲವ ಬೇಡಿರೊ ॥ ಪ ॥

ಚೆಂಡು ಬುಗುರಿ ಚಿಣ್ಣೆ ಕೋಲು ಗಜುಗನಾಡುತ ।
ದುಂಡು ಮಲ್ಲಿಗೆ ಮುಡಿದು ಕೊಳಲುನೂದಿ ಪಾಡುತಾ ।
ಹಿಂಡು ಪೆಣ್ಗಳ ಮುದ್ದು ಮುಖವ ಸೊಬಗು ನೋಡುತ ।
ಭಂಡು ಮಾಡಿ ಬಾಲೆರೊಡನೆ ಸರಸವಾಡುತ ॥ ೧ ॥

ಮಕರ ಕುಂಡಲ ನೀಲ ಮುತ್ತಿನ ಚವುಕವಿಡುತಲಿ ।
ಕಂಕಣ ಹಾರ ತೋಳುಬಂದಿ ತೊಡಿಗೆ ತೊಡುತಲಿ ।
ಮುಖದಕಮಲ ಮುಗುಳುನಗೆಯ ಸುಖವ ಕೊಡುತಲಿ ।
ಸುಕುಮಾರ ಸುಂದರನಾದಯುಡುಗೆ ವುಡುತಲಿ ॥ ೨ ॥

ಪೊಕ್ಕಳಲ್ಲಿ ಅಜನಪಡದ ದೇವ ದೇವನು ।
ಚಿಕ್ಕವುಂಗುಷ್ಟದಲ್ಲಿ ಗಂಗೆಯ ಪಡದನಿವನು ।
ಮಕ್ಕಳ ಮಾಣಿಕ್ಯ ಗುರುಪುರಂದರವಿಠಲ ರಾಯನು ।
ಅಕ್ಕರದಿಂದಲಿ ಮುಕುತಿ ಕೊಡುವ ರಂಗನಾಥನ ॥ ೩ ॥

**ಪದ : ೧೯** **ರಾಗ : ನಾಮನಾಮಕ್ರಿಯ, ತಾಳ : ಅಟ್ಟ**

ದಾಸನ್ನ ಮಾಡಿಕೊ ಯನ್ನ ಇಷ್ಟು ।
ಘಾಸಿ ಮಾಡುವರೇನೊ ಕರುಣಾ ಸಂಪನ್ನ ॥ ಪ ॥

ದುರ್ಬುದ್ಧಿಗಳನೆಲ್ಲ ಬಿಡಿಸಿ ನಿನ್ನ ।
ಕರುಣ ಕವಚಯನ್ನ ಅಂಗಕ್ಕೆ ತೊಡಸಿ ।
ಚರಣಸೇವೆ ಯನಗೆ ಕೊಡಿಸಿ ಅಭಯ ।
ಕರಪುಷ್ಪ ಯೆನ್ನ ಶಿರದಲ್ಲಿ ಮುಡಿಸಿ ॥ ೧ ॥

ದೃಢಭಕ್ತಿ ನಿನ್ನಲ್ಲಿ ಬೇಡಿ ದೇವ ।
ಅಡಿಗರಗುವೆನ್ನೈಯ್ಯ ಅನುದಿನ ಪಾಡಿ ।
ಕಡೆಗಣ್ಣಿನಿಂದಲಿ ನೋಡಿ ।
ಕೊಡು ನಿನ್ನ ಧ್ಯಾನವ ತಡೆಯದೆ ಮಾಡಿ ॥ ೨ ॥

ಮೊರೆಹೊಕ್ಕರೆ ಕಾಯ್ವ ಬಿರದು ಯನ್ನ ।
ಮರೆಯದೆ ರಕ್ಷಣೆ ಮಾಡೈಯ್ಯಾ ಪೊರದು ।
ದುರಿತಗಳೆಲ್ಲವು ಅಳಿದು ಗುರು ।
ಪುರಂದರವಿಠಲ ನೀ ಯನ್ನಗೊಲಿದು ॥ ೩ ॥

**ಪದ : ೨೦** **ರಾಗ : ಮಾರವಿ, ತಾಳ : ಅಟ್ಟ**

ನೋಡುವದೆ ಕಣ್ಣು ಕೇಳುವದೆ ಕಿವಿ ।
ಪಾಡುವದೆ ವದನ ।
ಗಾಡಿಕಾರ ಕೃಷ್ಣರಾಯನ ಕೂಡಿ ಕೊಂ ।
ಡಾಡುವ ಆಟದ ಸುಖದ ಸೊಬಗನೂ ॥ ಪ ॥

ಎಳೆದುಲಸಿಯ ವನಮಾಲೆಯ ಧರಿಸಿ ।
ಎಳೆ ಗೋವಳರೊಡನಾಡುವ ।
ತಳಿಲ(ತ) ತೋರಣದ ನೆಳಲಲ್ಲಿ ನಲಿವಾಗ ।
ನಳಿನನಾಭನ ಮುಗುಳುನಗೆಯ ಸೊಬಗನು ॥ ೧ ॥

ನವಿಲಿನಂತೆ ನಲಿವ ಹಂಸನಂತೆ ಕು ।
ಣಿವ ಕೋಗಿಲೆಂತೆ ಕೂಗುವಾ ।
ನವ ಯರಳೆಯಂತೆ ಚಿಗಿದಾಡಿ ತುಂಬೆ ಮು ।
ಖವ ತಗ್ಗಿಸುವಂತೆ ಝುಂಕರಿಸುವನಾ ॥ ೨ ॥

ಪೊಂಗೊಳಲೂದುತ್ತ ಮೃಗಪಕ್ಷಿಗಳೆಲ್ಲ ।
ಸಂಗಡಿಸುತಲಿಪ್ಪನಾ ಅಂಗಮರದ ।
ಅಂಗನೆಯರೆಲ್ಲರ ಕೂಡಿ ತಿಂಗಳೊಳಗೆ ।
ಸಂಗದಾಡುವ ದೇವನಾ ॥ ೩ ।

ಮೊಲ್ಲೆ ಮಲ್ಲಿಗಿ ಪೂವು ಮಾಲೆಗಳನು ಧರಿಸಿ ।
ಚೆಲ್ವೆಯರಿಗೆ ಮುಡಿಸುವ ।
ಜಲಕ್ರೀಡೆ ರಾಸಕ್ರೀಡೆ ಮೊದಲಾದಾಟಗಳಿಂದ ।
ಹುಲ್ಲೆಗಂಗಳೆ ಚೆಲ್ವಿನಂಗಾದಿ ಇಹ್ಯನೊ ॥ ೪ ॥

ಕುರೂಪಿ ಕುಬುಜೆ ಡೊಂಕವಿದ್ದ ರೂಪನೆ ಮಾಡಿ ।
ಶರಗ ಪಿಡಿಸಿ ಕೊಂಡನಾ ।
ಕರುಣಸಾಗರ ಗುರುಪುರಂದರವಿಠಲನ್ನ ।
ಶರಣಾಗತ ಸುರಧೇನುವೆನಿಪನಾ ॥ ೫ ॥

**ಪದ : ೨೧** **ರಾಗ : ಕಾಂಬೋದಿ, ತಾಳ : ಅಟ್ಟ**

ಆರು ನಮ್ಮ ಕಾಯುವರು ಅವನಿಯೊಳಗೆ ।
ದೇವರೆ ಲಕ್ಷ್ಮಿನಾರಾಯಣನಲ್ಲದೆ ॥ ಪ ॥

ಆವತಂದೆಯು ಸಲಹಿದನು ಪ್ರಹ್ಲಾದನ ।
ಆವತಾಯಿ ಸಲಹಿದಳು ಧ್ರುವರಾಯನ ।
ಆವ ಭ್ರಾತನು ಈರಡಿಸಿದ ವಿಭೀಷಣನ ।
ಸಕಲ ಸುರರೊಡೆಯ ಶ್ರೀಹರಿಯಲ್ಲದೆ ॥ ೧ ॥

ಆವಬಂಧುಗಳು ಸಲಹಿದರು ಗಜರಾಜನ ।
ಆವ ಪತಿಯಾದ ದ್ರೌಪದಿ ಮಾನಕೆ ।
ಆವನುಜನು ರಕ್ಷಿಸಿದ ಧರ್ಮಜನ ।
ಸಕಲಸುರರೊಡೆಯ ಶ್ರೀಹರಿಯಲ್ಲದೆ ॥ ೨ ॥

ಆವನಾಧಾರ ಅಡವಿಯೊಳಗಿದ್ದ ಮೃಗಗಳಿಗೆ ।
ಆವನಾಸ್ಪದ ಪಕ್ಷಿಜಾತಿಗಳಿಗೆ ।
ಆವರನು ಪೋಷಕರು ಗರ್ಭದೊಳಗಿನ ಶಿಶುಗೆ ।
ದೇವಗುರು ಪುರಂದರ ವಿಠಲನಲ್ಲದೆ ॥ ೩ ॥

**ಪದ : ೨೨** **ರಾಗ : ಶಂಕರಾಭರಣ, ತಾಳ : ಏಕ**

ಬುದ್ಧಿ ಮಾತು ಹೇಳಿದರೆ ಕೇಳಬೇಕಮ್ಮ ಮಗಳೆ ।
ಮನಶುದ್ಧಳಾಗಿ ಮನೆಯ ಗಂಡಗೆ ಬಾಳಬೇಕಮ್ಮಾ ॥ ಪ ॥

ಅತ್ತೆ ಮಾವಗಂಜಿ ಕೊಂಡು ನಡಿಯಬೇಕಮ್ಮ ಮಗಳೆ ।
ಚಿತ್ತದೊಲ್ಲಭನಕ್ಕರೆಯಲ್ಲಿ ಬಾಳಬೇಕಮ್ಮ ॥ ೧ ॥

ಹೊತ್ತು ಹೊತ್ತಿಗೆ ಮನೆಯ ಕೆಲಸ ಮಾಡಬೇಕಮ್ಮ ಮಗಳೆ ।
ಹತ್ತು ಮಂದಿ ಒಪ್ಪುವ ಹಾಂಗೆ ಬಾಳಬೇಕಮ್ಮ ॥ ೨ ॥

ಕೊಟ್ಟು ಕೊಂಬುವ ಬಂಧುಗಳೊಡನೆ ಕೋಪ ಬೇಡಮ್ಮ ಮಗಳೆ ।
ಅಟ್ಟು ಉಂಬುವ ಕಾಲದಲ್ಲಿ ಆಟಬ್ಯಾಡಮ್ಮ ॥ ೩ ॥

ಹಟ್ಟಿ ಬಾಗಿಲ ಬಿಟ್ಟು ಮುಂದೆ ನಿಲ್ಲಾ ಬ್ಯಾಡಮ್ಮ ಮಗಳೆ ।
ಕಟ್ಟಿ ಆಳುವ ಗಂಡನೊಡನೆ ಕೋಪಬೇಡಮ್ಮ ॥ ೪ ॥

ನೆರೆಹೊರೆಯವರಿಗೆ ನ್ಯಾಯ ನೀನು ಹೇಳಬ್ಯಾಡಮ್ಮ ಮಗಳೆ ।
ಗುರುಪುರಂದರವಿಠಲನ್ನ ಧ್ಯಾನವನ್ನು ಮರೆಯ ಬ್ಯಾಡಮ್ಮ ॥೫॥

**ಪದ : ೨೩** **ರಾಗ : ಪೂರ್ವಿ, ತಾಳ : ಆದಿ**

ನಂಬಬ್ಯಾಡ ನಾರಿಯರನು ಹಂಬಲಿಸಿ ಹಾರೈಸಿ ಹಿಗ್ಗಿ ।
ಅಂಬುಜಾಕ್ಷಿಯರೊಲಿಮಿ ಬಯಲ ।
ಡಂಬಕವೆಂದು ತಿಳಿಯಿರೊ ॥ ಪ ॥

ಆಟವೆಲ್ಲ ಪುಸಿಯು ಸತಿಯು ರಾಟವೆಲ್ಲ ಸಂಚು ಸನ್ನೆ ।
ನೋಟವೆಲ್ಲ ಕಾಟ ಘಾತ ಕೂಟವೆಲ್ಲ ವಂಚನೆ ।
ಪಾಟುಗೆಟ್ಟು ಹೆಂಗೆಳೆರೊಡನೆ ಕೋಟಲೆಗೊಳಲಿಬ್ಯಾಡಿ ।
ನೀಟಗಾರತೆಯರಸಂಗ ಬೂಟಕವೆಂದು ತಿಳಿಯಿರೊ ॥ ೧ ॥

ಸೋತೆನೆಂದು ವಿಟಗೆ ದೈನ್ಯದಿ ಮಾತನಾಡಿ ಮರಳುಗೊಳಿಸಿ ।
ಕಾತುರವ ಪುಟ್ಟಿಸಿ ಅವರನ ಮಾತೃ ಪಿತೃಗಳ ತೊರಿಯಿಸಿ ।
ಪ್ರೀತಿ ಬಡಿಸಿ ಹಣವ ಸೆಳೆದು ರೀತಿಗೆಡಿಸಿ ಕಡಿಯಲವನ ।
ಕೋತಿಯಂತೆ ಮಾಡುತಿಪ್ಪರು ಜಾತಿಕಾರ ಹೆಂಣಳಾ ॥ ೨ ॥

ಧರಣಿ ಜನರು ನೀವು ಕೇಳಿ ಕರುಣವಿಲ್ಲ ನಾರಿಯರಿಗೆ ।
ಯರಳಿ ಕಂಗಳು ಹೆಂಗಳೆರೊಲಿಮಿ ನೀರ ಮೇಲಿನ ಬರಹವೊ ।
ಮರುಳುಗೊಂಡು ಮೋಸಗೊಳದೆ ಬರಿದೆ ನೀವು ಕೆಡಲಿಬ್ಯಾಡಿ ।
ಗುರುಪುರಂದರವಿಠಲರಾಯನಚರಣ ಭಜಿಸಿ ಬದುಕಿರೊ ॥ ೩ ॥

**ಪದ : ೨೪** **ರಾಗ : ಕಾಂಬೋದಿ, ತಾಳ : ಆದಿ**

ಕೈಯ್ಯ ತೋರೊ ಕರುಣಿಗಳರಸನೆ ಕೈಯ್ಯ ತೋರೊ ।
ಕೈಯಲ್ಲಿ ಬೆಣ್ಣಿಯ ಮುದ್ದೆಯ ನೀವೆನೊ ॥ ಪ ॥

ಅಂಗುಲಿಯಲಿ ಪೊಂನ್ನುಂಗುರ ವೊಪ್ಪುವ । ಕೈ .... ।
ಶ್ರಿಂಗಾರದ ಶಂಖ ಚಕ್ರವಧರಿಸಿದ । ಕೈ .... ।
ಅಂಗೈಯಲಿಗದ ಪದ್ಮವು ರಾಜಿಪ । ಕೈ .... ।
ಅಂಗನಿಯರ ಉತ್ತುಂಗ ಕುಚದಲಿಟ್ಟ ಕೈ ..... ॥ ೧ ॥

ಬಡಬ್ರಾಹ್ಮಣನವಲಕ್ಕಿಯ ಬೇಡಿದ । ಕೈ ..... ।
ಕೊಡೆ ಮಾಡಿ ಗಿರಿಯೆತ್ತಿ ಗೋವನು ಕಾಯಿದ । ಕೈ..।
ಕಡುಹಿರಣ್ಯಕನ ವಡಲ ಬಗದ । ಕೈ .... ।
ದೃಢ ಪ್ರಹ್ಲಾದನ ಮಂಡಿಯಲಿಟ್ಟ । ಕೈ .... ॥ ೨ ॥

ಬಲ್ಲಿದ ಮಲ್ಲರ ಮರ್ದಿಸಿ ಬಂದ । ಕೈ ..... ।
ಮೆಲ್ಲನೆ ಕುಬುಜೆಯ ಡೊಂಕವ ತಿದ್ದಿದ । ಕೈ .... ।
ಅಲ್ಲಿ ಪೂತನಿಯ ಅಸುವ ಹೀರಿದ । ಕೈ ..... ।
ಮೆಲ್ಲನೆ ವೃಂದಾವನ ಕೆಳದೋರಿದ ಕೈ ..... ॥ ೩ ॥

ಬಲಿಯನು ವಂಚಿಸಿ ರಚ್ಚಿಗೆ ತಂದ । ಕೈ ..... ।
ಫಲಪುಷ್ಪವು ಪಾರಿಜಾತವ ತಂದ । ಕೈ ..... ।
ವಲಿದು ಅರ್ಜುನನ ರಥವ ನಡಿಸಿದ । ಕೈ ..... ।
ಅರಳುಮಲ್ಲಿಗೆ ತುರುಬಿಗೆ ಮುಡಿಸಿದ । ಕೈ .... ॥ ೪ ॥

ಆಕಾಶದಿ ಚಂದ್ರಮನ ಕರದ । ಕೈ ..... ।
ಅನೇಕ ಪುರುಷರಿಗಭಯವ ಕೊಡುತಿದ್ದ । ಕೈ ..... ।
ಅನೇಕ ಧ್ವನಿಯಿಂದ ಕೊಳಲ ನುಡಿಸುವ । ಕೈ ..... ।
ಶ್ರೀಕಾಂತ ಗುರುಪುರಂದರವಿಠಲ । ಕೈ ..... ॥ ೫ ॥

**ಪದ : ೨೫** **ರಾಗ : ಮಾರವಿ, ತಾಳ : ತ್ರಿವಿಡಿ**

ಬರಿದೆ ಹೋಯಿತು ಹೊತ್ತು ಶರೀರವು ಸ್ಥಿರವೆಂದು ।
ಮರತು ನಾ ಇದ್ದೆ ಹರಿಯೆ ॥ ಪ ॥

ಆಶೆಯೆಂಬುದು ಬಹು ಕ್ಲೇಶ ಬಡಿಸುತೀದೆ ।
ಮೋಸಾ ಹೋದೆನೊ ಹರಿಯೆ ।
ಶೇಷಶಾಯಿ ನಿನ್ನ ನಾಮವ ನೆನಿಯದೆ ।
ನಾಶವಾಯಿತು ದಿನಾ ಮೋಸ ಹೋದೆನ್ನೈಯ್ಯಾ ॥ ೧ ॥

ಸತಿ ಸುತರೆ ಗತಿಯೆಂದು ಅತಿಭ್ರಾಂತಿಗೊಳಗಾಗಿ ।
ಮತಿ ಹೀನನಾಗಿದ್ದೆನೊ ।
ಸತತದಲಿ ಜಡಮತಿ ನಾನಾದೇನೊ ।
ಖತಿಗೊಳುತದೆ ಮನ ಹರಿಸರ್ವೋತ್ತಮ ಬಲ್ಲಿ ॥೨॥

ಪರರವಾರ್ತೆಯನಾಡಿ ಪರರನೆ ಕೊಂಡಾಡಿ ।
ಮರತೆನೊ ನಿನ್ನ ನಾಮಾ ।
ಕರುಣದಿಂದಲಿ ಯನ್ನ ಮರಿಯದೆ ಸಲಹೈಯ್ಯ ।
ಗುರುಪುರಂದರವಿಠಲ ನಾ ನಿನ್ನ ನಂಬೀದೆ ॥ ೩ ॥

**ಪದ : ೨೬** **ರಾಗ : ಶಂಕರಾಭರಣ ತಾಳ :**

ಬೈದರಾರೊ ನಿನ್ನನು ಜೀವಾತ್ಮಾ ।
ಬೈದರಾರೊ ನಿನ್ನನೂ ॥ ಪ ॥

ಹೊಲೆಯನೆಂದು ನಿನ್ನ ಬೈದರಾದರೆ ನೀನು ।
ಬಲು ದುಃಖವೆಂದು ನೀನೊಂದಿಯಲ್ಲೋ ।
ಹೊಲಿಯಿಂದಾ ತಾಯಿ ಬಸುರಿಲಿ ಬಂದು ನರಕಾ ।
ದಿಳದೀಯಲ್ಲೋ ಆ ಮಾಂಸದಾ ಬೇಲಾ ।
ದೊಳಿದ್ದಿಯಲ್ಲೊ ಆಮೂತ್ರಾದ ಬಿಲಾದಿಂದ ಬಿದ್ದಿಯಲ್ಲೋ ॥೧॥

ಹಲಬರಿಗೆ ಹುಟ್ಟಿದವನೆಂದು ಬೈದಾರೆ ।
ಹಲ್ಲು ತಿಂದು ಮೇಲೆ ಮುರಿದೇಳಿವೇ ।
ಎಲೆ ಜೀವಾ ಎಂಭತ್ತು ನಾಲ್ಕು ಲಕ್ಷಾ ಯೋನಿಗ ।
ಳಲಿ ಬಂದಿಯಲ್ಲೋ ಪರಿಪರಿ ಪಾಪವೇ ಖತಿ ।
ಯಲ್ಲೋ ನೀನು ಆ ನರಕಕ್ಕೆ ಗುರಿಯಾದೆಲೋ ॥ ೨ ॥

ಬೈದರೆ ಹೊಗಳಿಹ್ಯನೆಂದು ತಿ ।
ಳಿದು ನೋಡಿ ನಿನ್ನೊಳಗೆ ನೀನು ।
ತಿಳಿದೂ ನೋಡಿ ಥಳಥಳಿಸುವಾ ।
ಗುರುಪುರಂದರ ವಿಠಲನ್ನ ।
ಪಾದ ಸೇವಿಗೆ ಸಾಧನ ಮಾಡಿಕೊಳ್ಳೊ ॥ ೩ ॥

**ಪದ : ೨೭** **ರಾಗ : ಮಧ್ಯಮಾವತಿ, ತಾಳ :**

ಜ್ಞಾನಿಯೆ ಸುಖಿ ಜಗದೊಳು ಹರಿಯ ।
ನಾನಾ ವಿಧ ತತ್ವಂಗಳನ್ನ ತಿಳಿವಾ ॥ ಪ ॥

ವಬ್ಬರಾದಾರಿಗೆ ಹೋಗಾದೆ ।
ಮತ್ತಿಬ್ಬರಿದ್ದಲ್ಲಿ ತಾ ನಿಲ್ಲದೇ ।
ಶಬ್ದಾದಿ ವ್ಯಾಪಾರದಲ್ಲಿ ಚಿತ್ತವಿಡದೇ ।
ಅಬ್ಜನಾಭನನಂಘ್ರಿಗಳಿಗರ್ಚಿಸುವ ಈ ॥ ೧ ॥

ತನುಮನ ಧನವು ವಂಚಿಸಿದೆ ವೈಷ್ಣವರಿಗೆ ।
ಅನುದಿನ ಪೂಜೆಯ ಮಾಡುತಲೀ ।
ಮನನ ಶ್ರವಣ ಧ್ಯಾನದಲ್ಲಿ ತನ್ನ ।
ದಿನಗಳು ಸಾರ್ಥಕ ಮಾಡಿಕೊಂಬ ಈ ॥ ೨ ॥

ವಾಸುದೇವ ಸರ್ವೋತ್ತಮನಾತನ ।
ದಾಸರು ಬೊಮ್ಮಾದಿಗಳೆಂಬೋದು ।
ಈ ಶರೀರ ಹೋದರೆ ಬಿಡೆನೆಂಬೋ ।
ವಿಶ್ವಾಸವ ತೆಗಿಯದೆ ನಂಬೊ ॥ ೩ ॥

ಪಂಚಭೇದದಿಂದ ಕೂಡಿಹ್ಯ ಪ್ರ ।
ಪಂಚ ದೋರುವೆಂದು ದೊರಿಸುತಾ ।
ವಂಚನೆ ಇಲ್ಲದೆ ಹರಿಪದಗಳಲ್ಲಿ ।
ಹಿಂಚು ಮುಂಚಿಲ್ಲಾದೆ ನಡವುತಲಿಪ್ಪ ಈ ॥ ೪ ॥

ಶ್ರುತಿ ಪಂಚರಾತ್ರ ಭಾರತ ಬ್ರಹ್ಮಾ ।
ಶತ ಕೋಟಿ ಮೂಲ ರಾಮಾಯಣ ಸ ।
ನ್ಮತ ಪ್ರಮಾಣಾ ಇದಕ್ಕೆಳ್ಳಷ್ಟನಿತಿಲ್ಲಾವೆಂದೂ ।
ಪ್ರತಿಕೂಲ ಪ್ರಮಾಣ ಅಸುರ ಮೋಹಕವೆಂಬೊ ॥ ೫ ॥

ಮೂವತ್ತೆರಡು ಲಕ್ಷಣಾಗಳುಳ್ಳ ।
ದೇವರೆಲ್ಲರು ಗುರು ಸುತಗೆ ।
ಶ್ರೀದೇವಿಯರು ಅತಿ ಸಾಕ್ಷಾತು ।
ವಿದ್ವನೊಬ್ಬಾನೆ ಸುರುವೆಂದು ತಿಳಿವ ಈ ॥ ೬ ॥

ವಂದೊಂದು ಗುಣದೊಳನಂತ ಗುಣಾ ।
ಇಂದಿರಾಪತಿ ಒಬ್ಬನೇ ।
ಎಂದು ಹೇಳುತ್ತಾ ಪೇಳುತ್ತಲೇ ಅ ।
ಲಂಬುದ್ಧಿಯ ಲೋಲ್ಯಾಡುತಿಪ್ಪ ಈ ॥ ೭ ॥

ತನ್ನಿಂದ ವಂದೆರಡು ಗುಣಾಗಳುಳ್ಳ ।
ಮನ್ಮಂತರುಗಳೆಲ್ಲ ಕ್ರಮದಿಂದಲೀ ।
ತನ್ನ ಗುರುಗಳೆಂಬರದಲ್ಲಿ ।
ಸನ್ಯಾಸಕಾರಮ್ಯಾ ಫಲವೆಂದು ತಿಳಿವ ಈ ॥ ೮ ॥

ಸರ್ವಜ್ಞ ಈಶ್ವರೋತ್ತಮ ಸರ್ವಕರ್ತು ।
ಸರ್ವ ಪ್ರೇರಕನೆಂದು ।
ಸರ್ವ ಅಹಂಕಾರಕ್ಕೆ ವಳಗಾಗದೇ ।
ಮತ್ತೆ ಸರ್ವ ಸಮರ್ಪಣೆ ಮಾಡುತಲಿಪ್ಪ ಈ ॥ ೯ ॥

ದೇವದಾನವ ಮಾನವ ಭೇದದಿಂದಾ ।
ಜೀವ ತ್ರಿವಿಧ ಸ್ವಭಾವವ ಆರಾಗಲಿ ।
ವಿಪರೀತರಾಗದೆ ಮತ್ತೆ ।
ಕಾವಕೊಲ್ಲುವ ಶ್ರೀಹರಿ ಎಂದು ತಿಳಿವ ಈ ॥ ೧೦ ॥

ಒಂಭತ್ತು ವಿಧದ ದ್ವೇಷಗಳಿಂದಾ ।
ಖಿಲಾಲಿಲ್ಲಾದೆ ಭಕುತಿಯನು ।
ಅಂಬುಜಧರನಲ್ಲಿ ಮಾಡುತ್ತ ವಿಶ್ವ ।
ಭವಾಂಬುಧಿ ಎಲ್ಲನೇ ದಾಟೀಸುವೆನೆಂಬ ಈ ॥ ೧೧ ॥

ಅರಿಷಡ್ವರ್ಗಕ್ಕೆ ವಲವು ಕೊಡದೇ ಮತ್ತೆ ।
ಶ್ರೀಹರಿ ನಡಿಸಿದಂತೆ ನಡವುತಾಲೀ ।
ವಿಷ್ಣುಸ್ಮರಣೆ ವಂದಕ್ಷಣನ್ನ ಬಿಡದೇ ಮತ್ತೆ ।
ಪರಮಪದವಿಗುದ್ಯೋಗ ಮಾಡುತಲಿಪ್ಪ ಈ ॥ ೧೨ ॥

ಹರಿ ಅಜ ಪ್ರತಿಬಿಂಬ ಪವನಾಗೆ ರುದ್ರ ।
ಗರುಡ ಶೇಷ ಇಂದ್ರಕಾಮರೂ ।
ಕ್ರಮದಿಂದ ನರೋತ್ತುಮರ ಪರಿಯಂತ ।
ಲವರ ತರುಣಿಯರ ತಾರತಮ್ಯವನ ತಿಳಿವ ಈ ॥ ೧೩ ॥

ಕಾಲದೇಶದಿಂದ ಕೂಡಿಹ್ಯವಳಾ ಶ್ರೀ ।
ಲೋಲಗೆ ಸರಿ ಮಿಗಿಲಿಲ್ಲಾವೆಂದೂ ।
ಮೂಲೋಕದಲಿ ಡಂಗುರವ ಹೊಯಿಸಿ ಮತ್ತೆ ।
ಸಾಲೋಕ್ಯವ ಸಡಗರದಿಂದ ಐದುವಾ ॥ ೧೪ ॥

ಕ್ಷರ ಅಕ್ಷರತೀತಾನು ನಮ್ಮ ಶ್ರೀ ಗುರು ।
ಪುರಂದರವಿಠಲ ಕಲ್ಯಾಣಗುಣಾ ।
ಪರಿಪೂರ್ಣನೆಂಬೊ ಉಪಾಸನೆಯಾ ಮರೆಯದೆ ।
ಮತ್ತೆ ಅನುದಿನ ಮರಿಯಾದೆ ಮಾಡುತಲಿಪ್ಪ ಈ ॥ ೧೫ ॥

**ಪದ : ೨೮** **ರಾಗ : ಶಂಕರಾಭರಣ, ತಾಳ : ರೂಪಕ**

ಶ್ರೀಮದಾನಂದತೀರ್ಥ ಭೀಮಹನುಮನಿಗೆ ಸಮರು ।
ಈ ಮೂಜಗದೊಳಿಲ್ಲವೆಂದು ।
ರಾಮ ಸಹಭೋಜನೀಯನೆ ॥ ಪ ॥

ಹರಿವಿರಿಂಚರ ಸಹಾಯದಿಂದ ।
ಹರ ತ್ರಿಪುರವ ನುರುಪಲಾಗಿ ।
ಬರಿದೆ ಕೊಂಡಾಡಿತು ಲೋಕ ।
ನಿನ್ನಂತಲಿ ಸಹಾಯದೀ ॥
ಶರಧಿಲಂಘಿಸಿ ದಾನವರನ ।
ತರಿದು ಸೀತೆಗುಂಗುರವಿತ್ತು ।
ಪುರವನುರಹೀ ಸಿರಿಯಕುರುಹ ।
ಹರಿಗೆ ತಂದಿತ್ತೆಯಾಗೀ ॥ ೧ ॥

ಸಾಸಿರ ಪೆಡೆಗಳನತುವೆ ।
ಈ ಸಚರಾಚರವನೆಲ್ಲಿ ।
ಸಾಸಿವೆಯಂದದಲಿಹ ।
ಶೇಷನ ತನ ಧರಿಸಿಹ ।
ಆ ಶಕುತಿಯ ತೋರಿಸಲು ।
ದಶಾಸ್ಯನೌಯ್ಯ ಸೌಮಿತ್ರಿಯನು ।

ದಾಶರಥಿಯ ಬಳಿಗೆ ತಂದು ।
ನೀ ಸಲಹಿದಿ ಜಗವರಿಯೆ ॥ ೨ ॥

ತನ್ನ ಜನನಿ ಒಬ್ಬಳಿಗೆ ಸು ।
ಪರ್ಣಿ ಬಳಲಿ ಸುಧೆಯ ತರಲು ।
ಇನ್ನು ಕೊಂಡಾಡಿತು ಲೋಕ ।
ನಿನ್ನಂತೆ ದೂರಲ್ಲಿಹ್ಯ ।
ಉನ್ನತ ಶತಯೋಜನದ ।
ಅನ್ಯರು ತೆಗೆಯಲಾರದ ಸಂಜೀ ।
ವನ್ನ ಗಿರಿಯ ತಂದು ಕಪಿಗ ।
ಳನ್ನು ಕಾಯಿದೆ ಕರಣದೀ ॥ ೩ ॥

ಸಕಲ ಕಪಿನಿಕರ ರಾಮನ ।
ತ್ರಿಕರಣದಿಂದ ಸೇವೆಯು ಮಾಡಿ ।
ಮುಕುತಿ ಬೇಡಲಿತ್ತು ನಿನಗೇನು ।
ಬೇಕೆನಲು ನಾಲಕು ಸುಪುರುಷಾರ್ಥ ಜರಿದು ।
ಭಕುತಿಯನೆ ಕೊಡೆನಲು ನವಕ ।
ನಕ ಸುಮಾಲೆ ಕೊರಳೊಳಿಟ್ಟು ಜಾ ।
ನಕಿ ರಮಣನು ನಿನ್ನ ಪೊಗಳೇ ॥ ೪ ॥

ಶರಧಿಯ ಮಥನದಲುದಿಸಿದಾ ।
ಗರಳಾ ಚರಾಚರವ ನಂಜಿಸೇ ।
ಸಿರಿಯರಸನ ಹೊನ್ನ ರತುನ ।
ಹರಿವಾಣದೊಳುಣುತಿಹ್ಯ ।
ಮರುತವತಾರ ವೃಕೋ ।
ದರನೆ ನೀನೆಂದರಿಯದೇ ।
ಮರುಳು ಕೌರವರಿಕ್ಕಿದ ವಿಷವಾ ।
ಸುರರು ಘೇಯನಲುಂಡು ತೇಗಿದೆ ॥ ೫ ॥

ಅವನಿ ಭಾರಕೆ ಮುಖ್ಯ ಕಾರಣ ।
ಕೌರವ ಕೀಚಕಾದಿಗಳನು ।
ಬವರ ಮುಖದಿ ಗದೆಯಲಿರಿದು ।
ಹವಿಯ ಕೃಷ್ಣಗರ್ಪಿಸಿ ।
ದಿವಿಜರೆದರುಗೊಳಲವ ।
ರವರವರ ತಾರತಮ್ಯದಿ ಮನ್ನಿಸೀ ।

ಪವನ ಲೋಕದಲ್ಲಿ ಮರೆದೆ ।
ದ್ರೌಪದಿ ದೇವಿ ಸಹಿತ ॥ ೬ ॥

ಸುರಾಸುರರ ಸಂಗ್ರಾಮದಲಿ ।
ಅರಿವಿಪ್ರಚಿತ್ತಿಯನ್ನೇ ಕೊಲ್ಲಲೂ ।
ವಿರಂಚಿಹರ ದೂರ್ವಾಸರ ।
ವರದಿ ಜರಾಸಂಧ ನೆನಿಸೀ ।
ಅರಸುಗಳನ ಕಾಡಲವನ ।
ಕೊರಳ ಪಶುವಿನಂದದಲೊತ್ತಿ ।
ಹರಿಗರ್ಪಿಸಿದೆ ಸಕಲ ಅ ।
ಧ್ವರದೊಳತಿ ಮಿಗಿಲೆಂದು ॥ ೭ ॥

ನಡುಗೇಹವೆಂಬೊದ್ವಿಜನ ।
ಮಡದಿ ಪುಣ್ಯೋದರದಲುದಿಸಿ ।
ಮೃಡನವರದಿ ಮರೆವರ ಮತ ।
ಅಡಿಗಡಿಗೆ ಸಚ್ಚಾಸ್ತ್ರದೀ ।
ತಡದು ಬಿಡದೆ ಶುಭ ಗುಣಗಣ ।
ಕಡಲಹರಿ ನಿರ್ದೋಷನೆಂದೂ ।
ಒಡಂಬಡಿಸಿ ಒಪ್ಪಿಸಿದೆ ।
ಪೊಡವಿ ಭೂಷಾಮಣಿಯೇ ನೀ ॥ ೮ ॥

ಮರುತ ನಿನ್ನವತಾರ ತ್ರಯವ ।
ನರಿತು ಭಜಿಪರಿಗೆ ಶ್ವೇತ ದ್ವೀಪ ।
ದರುಶನವನು ಮಾಡಿಸೀ ।
ಗುರುಪುರಂದರವಿಠಲನಾ ।
ಕರುಣಾ ಕಟಾಕ್ಷದಿಂದ ವೈಕುಂಠ ।
ಪುರದಿ ಅನಂತಾಸನದಲ್ಲಿ ।
ಪರಮಾನಂದರ ಮಾಡಿ ।
ಹೊರವೆ ಪರಿಪರಿ ಭೋಗಗಳನಿತ್ತು ॥ ೯ ॥

**ಪದ : ೨೯** **ರಾಗ : ಪುನ್ನಾಗವರಾಳಿ, ತಾಳ : ಝಂಪೆ**

ಇನ್ನಾದರು ನೀನು ನಿನಗೆ ತಿಳಿಯದರೆಂತು ।
ಅನ್ಯಾಯವುಂಟು ಕೇಳೊ ಆತ್ಮಾ ।

ಚನ್ನಾಗಿ ಚರಿಸುವರ ಹಿಂದೆ ತಿರುಗುವಂತ ।
ಬನ್ನಣ ಬ್ಯಾಡ ಕಂಡ್ಯಾ ಆತ್ಮ ॥ ಪ ॥

ಯೆಷ್ಟು ಜನ್ಮವ ಬಿಡದೆ ।
ಯೆಷ್ಟು ಬಸುರಿಲಿ ಬಂದೆ ।
ಯೆಷ್ಟು ತನುವಾಗಿ ಬೆಳದೆ ಆತ್ಮಾ ।
ಯೆಷ್ಟು ಮೊಲೆ ಪಾಲುಂಡು ।
ಯೆಷ್ಟು ದೇಶದಲಿದ್ದೆ ।
ಯೆಷ್ಟು ಸತಿಸುತರ ಪಡದೆ ಆತ್ಮ ।
ಯೆಷ್ಟೆಷ್ಟು ಬಂಧುಗಳ ಕೂಡ್ಯಾಡಿ ನೀ ।
ಯೆಷ್ಟು ಬಣ್ಣವು ತಾಳಿದೆ ಆತ್ಮಾ ॥ ೧ ॥

ಯಲವು ಕಡೆ ಯೆಂಭತ್ತು ನಾಲ್ಕು ।
ಕೀಲವುಮಾಡಿ ಬಹು ನರಂಗಗಳಿಂ ಬಿಗಿದು ಆತ್ಮಾ ।
ಸಲೆ ತೊಗಲು ಪೊದ್ದಿಸಿ ಮಜ್ಜ ಮಾಂಸವನಿಟ್ಟು ।
ಹೊಲೆ ಗೊಂಬೆಯಾದಿ ಯೆಲೇ ಆತ್ಮಾ ।
ಮಲಮೂತ್ರ ಪೂರಿತ ಮನೆಗೆ ಬರಲೊಂಭತ್ತು ।
ಬಳಸಿ ಕೊಂಡಿಹ್ಯ ಬಾಗಿಲು ಆತ್ಮಾ ।
ಬಲವಂತರೀರ್ವರು ಪಂಚಭೂತಗಳಲ್ಲಿ ।
ನೆಲೆಯಿಲ್ಲ ಈ ದೇಹಕ್ಕೆ ಆತ್ಮಾ ॥ ೨ ॥

ಮೂವ್ವರೇರಿದ ಭಂಡಿ ಹೋನೆರನೆಂಬುವದು ।
ಮೂರು ಬಣ್ಣದವರು ಆತ್ಮ ।
ತೀವರದ ಅರಿಷಡ್ವರ್ಗ ಕಳ್ಳ ಕೊಪ್ಪೆ ಬು ।
ಕಾವ ಯಿಸಿಕೊಂಬೋರಿಲ್ಲೊ ಆತ್ಮಾ ।
ಆವಾವ ಬಗೆಯಲ್ಲಿ ಈ ।
ಮಹಾಯಮ ಭಟರು ।
ಆಹೂತಿಯ ಕೊಂಬೋರಲೊ ಆತ್ಮಾ ॥ ೩ ॥

ನೆಚ್ಚದಿರು ಈ ವಡಲ ।
ನೆಚ್ಚದಿರು ಈ ದೇಹ ।
ನೆಚ್ಚದಿರು ಈ ಬಲವ ನೀ ಆತ್ಮಾ ।
ನೆಚ್ಚದಿರು ಐಶ್ವರ್ಯ ನೆಚ್ಚದಿರು ವುಬ್ಬಿನಲಿ ।

ಹೆಚ್ಚದಿರು ಅಹಂಕೃತಿಯಲಿ ಆತ್ಮಾ ।
ಕೊಚ್ಚಾದಿರು ಯೆಲ್ಲರಲಿ ।
ಕಚ್ಚದಿರು ಬಲ್ಲಿರಲಿ ।
ಕಚ್ಚದಿರು ಶುನಕನಂತೆ ಆತ್ಮಾ ॥ ೪ ॥

ಸತ್ಯವೆಂಬುವ ಮಹಾ ಸಾಮ್ರಾಜ್ಯ ಪದವಿಯಲಿ ।
ನಿತ್ಯ ವಾಲಗವ ಮಾಡೊ ಆತ್ಮಾ ।
ಮುತ್ತು ರತ್ನಗಳಿಂದ ಮೂರಂತರಂಗದೊಳು ।
ಮೂವ್ವರೊಡಿಯರ ಕೂಡಿಸೊ ಆತ್ಮಾ ।
ಅತ್ಯಧಿಕ ದಯವುಳ್ಳ ಅನ್ನದಾನಗಳಿಂದ ।
ಮೃತ್ಯು ಭಯವೆಲ್ಲ ನೂಕೊ ಆತ್ಮಾ ।
ಕತ್ತಲೆಯ ಕಳವಳಿದು ಘನ ಪಾಶಾಗಳೆಲ್ಲ ।
ವತ್ತಿ ನಿಜ ಬೆಳಕು ನೋಡೊ ಆತ್ಮಾ ॥ ೫ ॥

ನೋಡಿ ಮಾಡಲಿ ಬ್ಯಾಡ ಆಡಿ ಹುಸಿಯಲಿ ಬ್ಯಾಡ ।
ಬೇಡಿದರ ಕಾಡಬ್ಯಾಡ ಆತ್ಮಾ ।
ಥಾಡಿ ಛಡಿ ತೆಗಳಾಡಿ ಪಂತಗಳ್ಹುಡಿ ।
ಕೋಡಿ ನೀನಾಗ ಬ್ಯಾಡ ಆತ್ಮಾ ।
ಹಾಡಿ ಹಲವರ ಜರಿದು ಹಗರಣ ಗುರಿಯಾಗಿ ।
ಮೂಢನೆಂದಿನಸ ಬ್ಯಾಡ ಆತ್ಮಾ ।
ನಾಡುಕೇಡಿಯಾಗಿ ನಂಬಿದರೆ ಸಹದೆ ।
ನಡೆ ವರಹನಾಗ ಬ್ಯಾಡ ಆತ್ಮಾ ॥ ೬ ॥

ನೆಲೆ ಸೂತ್ರನೊಂದಾಗೊ ।
ಗಣಸೂತ್ರ ನೀನಾಗೊ ಸ ।
ಕಲ ಗುಣವಂತನಾಗೋ ಆತ್ಮಾ ।
ಬಲು ಶೂರ ನೀನಾಗೊ ಭಾಗವತ ನೀನಾಗೊ ।
ಪರಮ ಪುಣ್ಯಾತ್ಮನಾಗೊ ಆತ್ಮಾ ।
ಚಲುವ ಗುರುಪುರಂದರ ವಿ ।
ಠಲ ರಾಯನ ಚರಣ ಸೇವಕನಾಗೆಲೊ ಆತ್ಮಾ ॥ ೭ ॥

– ಶ್ರೀ ಕೃಷ್ಣಾರ್ಪಣಮಸ್ತು –